Photo by P. K. Patel



ಬಹುಮಾನ
ಪಡೆದ ಶೀರ್ಷಿಕೆ

ಮಾಯದ ಬಗೆ

ಕಳಿಸಿದವರು:
ಎಂ. ಎಲ್. ನಾರಾಯಣಾಚಾರ್ಯ



ಮಗುವಿಗೆ
ಇವು
ಬಲು ಇಷ್ಟ

ಜೆ. ಬಿ. ಮಂಘಾರಾಮ್ ರವರ

# NOURISHING

ನರಿಷಿಂಗ್ ಬಿಸ್ಕಟ್ಟುಗಳು




ಮಗುವಿಗೆ ಹಲ್ಲು ಬರುವಾಗ ನರಿಷಿಂಗ್ ಬಿಸ್ಕಟ್ಟುಗಳನ್ನು ಕೊಡಿರಿ. ಆ ಕಟಕಟವನ್ನೂ ಆ ರುಚಿಯನ್ನೂ ನೋಡಿದರೆ ಮಗು ಬಹು ಇಷ್ಟಪಡುತ್ತದೆ. ಮೇಲಾಗಿ ಈ ಬಿಸ್ಕಟ್ಟುಗಳು ಆರೋಗ್ಯ ಕೊಡುವ ವಿಟಮಿನ್ನುಗಳಿಂದ ತುಂಬಿವೆ.

ಉತ್ತಮ ದರ್ಜೆಯವು: ಅಮೂಲ್ಯ ವಿಟಮಿನ್ನುಗಳು.

ಜೆ. ಬಿ. ಮಂಘಾರಾಮ್ ಅಂಡ್ ಕೋ., ಗ್ವಾಲಿಯರ್

---

ಬ್ರಾಂಚ್: 35/37, ತಂಬುಚೆಟ್ಟಿ ಬೀದಿ, ಜಿ. ಟಿ. ಮದ್ರಾಸು.

M1

# ಚಂದಮಾಮ

ಸಂಚಾಲಕರು: 'ಚಕ್ರಪಾಣಿ'

---

" **ತುಂ**ಬಿದ ಕೊಡ ತುಳುಕುವುದಿಲ್ಲ" ಎಂಬುದು ಹಿರಿಯರು ಆರಿಸಿಕೊಟ್ಟ ತತ್ವಮಣಿ. ಅದೇ ಮುಕ್ಕಾಲೋ, ಅರ್ಧವೋ ತುಂಬಿದ ಬಿಂದಿಗೆಯನ್ನು ಹೊತ್ತು ಕೊಂಡೊಯ್ಯುವುದು ಬಲುಪ್ರಯಾಸ. ಆದರ ತುಳುಕಾಟದಿಂದ ಮೈಯೆಲ್ಲಾ ಒದ್ದೆಯಾಗುತ್ತದೆ. ಅಂದರೆ ನಿಜವಾದ ವಿದ್ಯಾವಂತನು, ತುಂಬಿದ ಕೊಡದಂತೆ ಯಾರನ್ನೂ ನೋಯಿಸಲಾರ; ಬದಲಾಗಿ ಉಪಕರಿಸುತ್ತಾನೆ. ತನಗಿರುವ ಜ್ಞಾನವು ದೇವರ ದಯೆಯಿಂದ ಬಂದಿರುವುದೆಂದು ನಂಬಿರುತ್ತಾನೆ. ಆದುದರಿಂದ ತನಗಿರುವ ವಿಶೇಷತೆ ಬೇರೆಯವರಿಗಿಲ್ಲವೆಂದು ತಾತ್ಸಾರಭಾವ ತಾಳುವುದಿಲ್ಲ. ಅಂತಹ ದಿವ್ಯಪ್ರತಿಭಾಶಾಲಿಯೂ ಮಹೋಪಕಾರಿಯೂ ಆಗಿದ್ದ ನಮ್ಮ ಕಾಳಿದಾಸ. ಆತನ ನಿತ್ಯನೂತನ ಅಮರಕಥೆಗಳಲ್ಲಿಯೂ ಚಂದಮಾಮ ತನ್ನ ಕಿರಣ ಬೀರುವುದನ್ನು ನೀವೆಲ್ಲಾ ಆದರಿಸುವಿರಷ್ಟೆ?

ಮೇ
೧೯೫೫



ಸಂಪುಟ ೧೪
ಸಂಚಿಕೆ ೫

# ನರಿ - ತೋಳ

ಪ್ರಾಯಮುಂಬರಿದು ಹಿಂಬರಿದಿತ್ತು,
ಸತ್ತುಚ್ಚ ಕೇರಿ ಕೆಳಬರುತಿತ್ತು,
ಕೆಚ್ಚು ಕುಂದಿತ್ತು, ಇನ್ನಧಿಕಾರಂ
ಜಾರಿಪೋಪುದೇನೋ! ಗ್ರಹಚಾರಂ!

ತೋಳ್ಗಳ ಮಸಳಿಕೆ, ನಾಡಿಯ ಬಡಿತವ
ತನ್ನದು ತಾನೇ ನೋಡಿಕೊಂಡು, 'ಜವ-
ಗೇಡಿಯಾದೆ, ಬಲಗೇಡಿಯಾದೆ ಹಾ!
ಮದವಿಳಿಯಿತಲಾ! ಮುದಿಯಾದೆನಲಾ!'

ಎಂದು ಮರುಗಿಯಾ ಸಿಂಗವು ಕಡೆಗೆ
ಶಾಸನಿಸಿತು ಎಲ್ಲಾ ಮೃಗಗಳಿಗೆ:






'ಕಾಡನಾಳ್ವ ಜವಸತ್ವವ ಬರಿಸುವ
ಔಷಧವೊಂದನು ತರಬೇಕೆ'ನುವಾ

ಆಜ್ಞೆಯ ಭಯದಿಂದೀಡೇರಿಸಲು
ತೊಡಗಿದುವೆಲ್ಲಾ ದಾಸ ಮೃಗಗಳೂ!
ಹುಡುಕಿ ಹುಡುಕಿ ಏನೋ ಒಂದೌಷಧಿ
ಪ್ರತಿ ಮೃಗವೂ ತರುತಿರೆಯಾ ಸಮಯದಿ,

ನರಿ ತಾ ಬರಿದೇ ಕುಳಿತಿರೆ ಕಂಡು,
ತೋಳ ಹಳೆಯ ಹಗೆಯಂ ಕೈಕೊಂಡು,
ಮಾರಿ ನರಿಯ ಕೊಲ್ಲಿಸಬೇಕೆನ್ನುತ,
ಸಿಂಹದ ಕಿವಿಗೂದಿತು ವಿಷವಾತ.

ತೋಳದ ಚಾಡಿಯ ಮೋಡಿಯ ಕೇಳುತೆ
ಸಿಂಗರಾಯ ಬಲು ರೋಷವ ತಾಳುತೆ,





" ಮಾರಂಗ "

ದಿನದಿನ ನಾಡಿಗೆ ಬಿಸಿಬಿಸಿಯೇರ್ವುದು,
ಎಳೆತನ, ಯೌವನ ಮೇಲ್ಮೇಲುಗುವುದು.

ದೇವಿಯ ನುಡಿಮುಮ್ಮಾತಿಗುದಿಟ'ವೆನೆ
'ಹುಂ ನೋಡುವೆ ನಾನೀಗಳೆಯಂತೆನೆ'
ಎನ್ನುತ ಸಿಂಗಂ ಒಮ್ಮೆಗೆ ಚಿಗಿದಂ,
ಚಾಡಿಗಾರ ತೋಳನ ತನು ಬಗೆದಂ!

ಅಧಿಕಾರಿಗಳಾ ಬೇಟೆಯೆ ಘೋರಂ!
ಅಡಿಯಾಳುಗಳಾ ಪಾಡತಿಪಾಪಂ.
ಇದನರಿಯದೆ ಅಬಲರ್ ಮಚ್ಚರಿಸುತೆ,
ಅಳಿಯದೆ, ಒಗ್ಗಟ್ಟಾಗಿರಿ–ಜಾಗ್ರತೆ!

'ಎಲ್ಲಿದೆಯಾ ನರಿ? ಕ್ಷುಲ್ಲಕ! ಸೀಳುವೆ!'–
ಗರ್ಜಿಸಲಾಯಿತು ಗುಡ್ಡದಿ ಕಾಲುವೆ!

ಆನೆ ಹೆದರಿ ನರಿಯಂ ಹಿಡಿತರುತಿರೆ,
ಆ ನರಿಯರಿಯಿತು ತೋಳದ ಹಗೆಯೊರೆ,
ತಂತ್ರದ ನರಿ ತಾ ನಿನಿತೂ ಬೆದರದೆ
ಸಿಂಹಕೆ ಕೈ ಮುಗಿದತಿಯತಿ ವಿನಯದೆ,

'ನಿಮ್ಮ ಕಾಯಲೇನುಪಾಯ ವೆನ್ನುತ
ಅಮ್ಮನವರ ಮುಂದಾನ್ ಕಣ್ಮುಚ್ಚುತ
ಬೇಡಿ ಬಂದೆಯಾ ದೇವಿಯ ನುಡಿಯ
ಲಾಲಿಸಿ, ಜೀಯಾ ದಿವ್ಯೌಷಧಿಯ!

ತೋಳನ ನೆತ್ತರಿನೌಷಧಿ ಕುಡಿದು
ಮಲಗೆ–ತೋಳನಾ ಚರ್ಮವ ಹೊದೆದು,



# ಮುಖಚಿತ್ರ

ಧರ್ಮಾತ್ಮರಾದ ಪಾಂಡವರ ಅರಣ್ಯವಾಸವು ಹಾಗೆಯೇ ಸಾಗುತಿದ್ದಿತು. ಅದೇನೂ ಅವರಿಗೆ ಕಷ್ಟವೆನಿಸಲಿಲ್ಲ. ಉತ್ಸಾಹದಿಂದ ಅವರ ಹೊತ್ತು ಹೋಗುತ್ತಾ ಹತ್ತು ವರ್ಷ ಕಳೆದುಹೋಯಿತು. ಈ ಅವಧಿಯಲ್ಲಿ ಭೀಮಾರ್ಜುನರಿಗಾದ ಶಕ್ತಿಲಾಭ ಗಳು ಬಹಳ ಮಹತ್ವವಾದುವು. ಧರ್ಮರಾಯನ ಧರ್ಮಬಲವೂ ಹೆಚ್ಚಾಯಿತು. ಇನ್ನು ಕಟ್ಟಕಡೆಯ ಎರಡು ವರ್ಷಗಳನ್ನು ಕಳೆದರೆ ವನವಾಸ ಮುಗಿಯುತ್ತದೆ.

ಹೀಗೆ ಉತ್ಸಾಹದಿಂದ ಧರ್ಮರಾಯಾದಿಗಳು ದ್ರೌಪದೀ ಸಮೇತರಾಗಿ ಸರಸ್ವತೀನದಿಯ ತೀರವನ್ನು ಹಿಡಿದು ದ್ವೈತವನವನ್ನು ಸೇರಿದರು. ನಂತರ ಅಲ್ಲಿಂದ ಸಾವಕಾಶವಾಗಿ ಹಿಂದಿನ ಕಾಮ್ಯಕವನವನ್ನು ಪ್ರವೇಶಮಾಡಿದರು. ಇವರೊಂದಿಗೆ ಅನೇಕ ಬ್ರಾಹ್ಮಣರೂ ಋಷಿಗಳೂ ಇದ್ದರೆಂದು ಹೇಳಬೇಡವಷ್ಟೆ?

ಅಲ್ಲಿ ಒಂದುದಿನ ಅರ್ಜುನನ ಗೆಳೆಯ ಬ್ರಾಹ್ಮಣನೊಬ್ಬನು ಮುಂದೋಡಿ ಬಂದು, ಶ್ರೀಮದ್ವಾಸುದೇವನು ಸತ್ಯಭಾಮಾಸಮೇತನಾಗಿ ಅಲ್ಲಿಗೆ ಬರುತ್ತಿರುವ ಶುಭವಾರ್ತೆಯನ್ನು ತಿಳಿಸಿದನು.

ಪಾಂಡವರು ಆಪದ್ಬಾಂಧವನಾದ ಶ್ರೀಕೃಷ್ಣನನ್ನು ಅತ್ಯಾದರದಿಂದ, ಗೌರವ ದಿಂದ, ಭಕ್ತಿಯಿಂದ ಇದಿರುಗೊಂಡರು. ಕೃಷ್ಣನು ಪಾಂಡವರೈವರಿಗೂ ತನ್ನ ದಿವ್ಯಾಲಿಂಗನವನ್ನಿತ್ತನು. ಸತ್ಯಭಾಮಾ ದ್ರೌಪದಿಯರೂ ಪರಸ್ಪರ ಆಲಿಂಗಿಸಿ ಹಸನ್ಮುಖಿಗಳಾಗಿ ಆಪ್ತಾಲಾಪನೆಗೆ ಇಳಿದರು.

ಧರ್ಮರಾಯನು ಇದುವರೆಗೆ ನಡೆದ ಅರಣ್ಯವಾಸದ ವಿಶೇಷಗಳನ್ನೆಲ್ಲ ಕೃಷ್ಣ ನಿಗೆ ಅರಿಕೆಮಾಡಿಕೊಂಡನು. ಭಗವಾನನಾದ ಕೃಷ್ಣನಿಗೆ ಅದೆಲ್ಲಾ ಗೊತ್ತಿದ್ದ ವಿಷಯುಗಳೇ. ಕೃಷ್ಣನ ಮಾತಿನ ಸಾರವಿದು:

"ಕರ್ತವ್ಯನಿಷ್ಠರಾದ ನೀವು ಕಷ್ಟಸುಖಗಳಲ್ಲಿ ಭೇದಕಾಣುವುದಿಲ್ಲ. ನಿಮಗೆ ಕೇಡುಬಗೆದವರ ಸುಖವು ಅಂತ್ಯವಾಗುವ ಕಾಲ ಸಮಿಾಪಿಸಿತು. ನಿಮ್ಮ ವನವಾಸ ದಿಂದ ನಿಮಗೆ ಅನೇಕ ತರದ ಶಕ್ತಿಗಳು ಲಭಿಸಿದುವು. ಅಷ್ಟೇ ದುರ್ಯೋಧನನ ಶಕ್ತಿ ಕ್ಷೀಣವಾಗಿರುವುದನ್ನು ನಾನು ಬಲ್ಲೆ. ಇನ್ನು ಶೀಘ್ರದಲ್ಲಿಯೇ ನಿಮಗೆಲ್ಲ ಶುಭ ವಾಗುವುದು. ಉಳಿದ ಅಲ್ಪಾವಧಿಯ ಅರಣ್ಯವಾಸ, ಅಜ್ಞಾತವಾಸಗಳನ್ನು ನಿಶ್ಚಿಂತೆ ಯಿಂದ ಕಳೆಯಿರಿ. ನಿಮಗೆ ಜಯವಾಗುವುದು."

ಇದನ್ನು ಕೇಳಿ ಪಾಂಡವರೂ ಇತರ ಪರಿವಾರವೂ "ಜಯ ಜಯ ಶ್ರೀಕೃಷ್ಣ" ಎಂದು ಘೋಷಣಮಾಡಿದರು.




ಕಳಿಂಗರಾಜ್ಯದಲ್ಲಿ ಅನೇಕ ಭಾರಿ ನಗರಗಳಿದ್ದವು. ಅದರಲ್ಲಿ ದಾಂತಿಪುರವೆಂಬ ನಗರಕ್ಕೆ ಅರಸ ಕಳಿಂಗ ಎಂಬಾತ. ಆತನಿಗೆ ಹಿರಿಯ ಕಳಿಂಗ, ಕಿರಿಯ ಕಳಿಂಗರೆಂಬ ಇಬ್ಬರು ಮಕ್ಕಳಿದ್ದರು. ಅವರ ಜಾತಕಗಳನ್ನು ಗುಣಿಸಿ ನೋಡಿದ ದೈವಜ್ಞರು ಹೀಗೆಂದು ಹೇಳಿದರು:

"ತಂದೆಯನಂತರ ಹಿರಿಯವನು ರಾಜ್ಯಾಧಿಕಾರಿಯಾಗುವನು. ಕಿರಿಯವನದು ತುಂಬಾ ವಿಚಿತ್ರವಾದ ಜಾತಕ. ಆತನು ತನ್ನ ಜೀವಮಾನವನ್ನೆಲ್ಲಾ ಸನ್ಯಾಸಿಯಾಗಿ ಕಳೆಯುವನು. ಆದರೆ ಆತನಿಗೆ ಮಹಾರಾಜಯೋಗವಿರುವ ಅದೃಷ್ಟವಂತನಾದ ಮಗನು ಜನಿಸುವನು."

ಕೆಲವು ದಿನಗಳನಂತರ ಕಳಿಂಗರಾಜನು ಕಾಲವಶನಾದನು. ಜ್ಯೈಷ್ಠಪುತ್ರನು ಸಿಂಹಾಸನವನ್ನೇರಿದನು. ಕಿರಿಯವನಿಗೆ ರಾಜಪ್ರತಿನಿಧಿಯ ಪದವಿ ಲಭಿಸಿತು. ತನಗೆ ಹುಟ್ಟುವ ಮಗನು ಮಹಾರಾಜನಾಗುವನೆಂದು ದೈವಜ್ಞರು ನುಡಿದಿದ್ದ ಮಾತುಗಳು ಕಿರಿಯ ಕಳಿಂಗನ ಮನದಲ್ಲಿ ಬೇರೂರಿತ್ತು. ಈ ಧಿಮಾಕಿನಿಂದ ಆತನು ಅಣ್ಣನಿಗೆ ಸಲ್ಲಿಸಬೇಕಾದ ಮರ್ಯಾದೆಗಳನ್ನು ಸಲ್ಲಿಸದೆ ಸ್ವತಂತ್ರನಾಗಿ ವ್ಯವಹರಿಸುತ್ತಿದ್ದ. ಉಭಯರನಡುವೆ ಆಗಾಗ ಘರ್ಷಣೆಗಳಾಗುತ್ತಿದ್ದುವು. ರಾಜನು ತನ್ನ ತಮ್ಮನನ್ನು ಬಂಧಿಸುವಂತೆ ಆಜ್ಞೆ ಮಾಡಿದನು.

ಅದೇಕಾಲದಲ್ಲಿ ಬೋಧಿಸತ್ವನು ಅವತರಿಸಿ ಕಳಿಂಗರಾಜ್ಯದ ಮಂತ್ರಿಗಳಲ್ಲಿ ಒಬ್ಬನಾಗಿದ್ದನು. ಹಿರಿಯ ಕಳಿಂಗನ ರಾಜ್ಯಭಾರಕಾಲದಲ್ಲಿ ಆತನು ವೃದ್ಧನಾಗಿದ್ದನು. ರಾಜಕುಟುಂಬದ ಹಿತ ಕೋರಿದ ಆ ವೃದ್ಧ ಮಂತ್ರಿ ಕಿರಿಯ ಕಳಿಂಗನ ಸನಿಯಕ್ಕೆ ಹೋಗಿ, ರಹಸ್ಯವಾಗಿ ರಾಜಾಜ್ಞೆಯನ್ನು ತಿಳಿಸಿದನು. ಮುಂದೆ ತನಗುಂಟಾಗುವ ಅವಮಾನವನ್ನು ಅರಿತುಕೊಂಡ ಕಿರಿಯ ಕಳಿಂಗ.

"ಪಾಪ, ಎಲ್ಲಬಗೆಯಿಂದ ನೀವೇ ಹಿತೈಷಿಗಳು. ಅಂದು ಜೋತಿಷ್ಯನು ಹೇಳಿದ ಮಾತುಗಳು ನಿಮಗೆ ನೆನೆಪಿದೆಯಷ್ಟೆ. ಹಾಗೆಯೇ ನಡೆದರೆ ನನ್ನ ಕೋರಿಕೆಯನ್ನು ನೆರವೇರಿಸುವ ಬಾಧ್ಯತೆ ನಿಮ್ಮಮೇಲಿದೆ. ಇದೋ, ನನ್ನ ಹೆಸರು ಕೆತ್ತಿರುವ ಮುದ್ರೆಯುಂಗುರ, ನನ್ನ ಶಾಲು, ನನ್ನ

ಯಚ್. ನಾರಾಯಣರಾವ್



ಖಡ್ಗ—ಈ ಮೂರನ್ನು ಯಾರು ನಿಮ್ಮ ಬಳಿಗೆ ತಂದು ಗುರುತು ತೋರಿಸುತ್ತಾರೆಯೋ ಅವನೇ ನನ್ನ ಮಗನೆಂದು ಭಾವಿಸಿ ಮುಂದಿನ ಕರ್ತವ್ಯವನ್ನುಮಾಡಿ" ಎಂದು ಹೇಳಿ ಯಾರಕಣ್ಣಿಗೂ ಬೀಳದಂತೆ ಅಡವಿಗೆ ಓಡಿಹೋದನು.

* * *

ಮಗಧರಾಜನಿಗೆ ಒಬ್ಬಳೇ ಒಬ್ಬ ಮಗಳು. ಆಕೆಯ ಜಾತಕ ನೋಡಿದ ಜೋತಿಷ್ಕರು "ಇದೊಂದು ಅತಿ ಆಶ್ಚರ್ಯಕರವಾದ ಜಾತಕ. ರಾಜಕುಮಾರಿ ಸನ್ಯಾಸಿನಿಯಾಗಿ ತನ್ನ ಬಾಳನ್ನು ನೂಕುವಳು. ಆದರೆ ಆಕೆಗೆ ಮಹಾರಾಜಯೋಗವಿರುವ ಮಗನು ಹುಟ್ಟುವನು" ಎಂದು ಹೇಳಿದ್ದರು. ಈ ವಿಷಯ ತಿಳಿದಕೂಡಲೇ ಸಾಮಂತರಾಜರೆಲ್ಲರೂ ರಾಜಕುಮಾರಿಯನ್ನು ವಿವಾಹವಾಗಲು ತಾನು ತಾನು ಎಂದು ಮುಂದೆ ಬಂದರು. ರಾಜನು ಇಕ್ಕಟ್ಟಿಗೆ ಸಿಲುಕಿಕೊಂಡನು. ಅವರಲ್ಲಿ ಯಾರೊಬ್ಬರಿಗೆ ತನ್ನ ಮಗಳನ್ನು ಕೊಟ್ಟು ವಿವಾಹಮಾಡಿದರೂ ಉಳಿದವರು ಕುಪಿತರಾಗಿ ಸೇಡು ತೀರಿಸಿಕೊಳ್ಳುವುದು ಸಹಜ. ಹೇಗಾದರೂ ಈ ಅಪಾಯದಿಂದ ತಪ್ಪಿಸಿಕೊಳ್ಳಲೇಬೇಕೆಂದು ಆತನು ನಿರ್ಧರಿಸಿದನು. ಬೇರೆಮಾರ್ಗವಿಲ್ಲದೆ ಮಡದಿ ಮತ್ತು ಮಗಳನ್ನು ಕರೆದುಕೊಂಡು, ವೇಷಮರೆಯಿಸಿ ಅರಣ್ಯಕ್ಕೆ ಪಲಾಯನಮಾಡಿದನು.

ನದಿತೀರದಲ್ಲಿ ಒಂದು ಪ್ರಸಸ್ತವಾದ ಸ್ಥಳವನ್ನು ಆರಿಸಿ ಒಂದು ಸಣ್ಣ ಕುಟೀರವನ್ನು ನಿರ್ಮಿಸಿಕೊಂಡು ಅದರಲ್ಲಿ ಮೂವರೂ ವಾಸಿಸುತ್ತಿದ್ದರು. ಇವರ ಕುಟೀರಕ್ಕೆ ತುಸ ದೂರದಲ್ಲಿ ಕಳಿಂಗರಾಜಪುತ್ರನ ಕುಟೀರವಿದ್ದಿತು.

ಒಂದುದಿನ ಮಗಳನ್ನು ಕುಟೀರದಲ್ಲಿ ಬಿಟ್ಟು, ಮಗಧರಾಜದಂಪತಿಗಳು ಕಂದಮೂಲಫಲಾದಿಗಳನ್ನು ತರಲು ಹೊರಟರು. ಅವರು ಹೋದ ಸಮಯದಲ್ಲಿ ರಾಜಕುಮಾರಿ ವಿವಿಧ ಬಣ್ಣದ ಹೂಗಳನ್ನು ಆರಿಸಿ, ಮನೋಹರವಾದ ಒಂದು ಮಾಲೆಯನ್ನು ಕಟ್ಟಿದಳು.

ಕುಟೀರದ ಪಕ್ಕದಲ್ಲಿದ್ದ ನದೀತೀರದಲ್ಲಿ ಒಂದು ಮಾವಿನಮರವಿತ್ತು. ರಾಜಪುತ್ರಿ ಆ ಮರವನ್ನೇರಿ ಒಂದು ಕೊಂಬೆಯಮೇಲೆ ಕುಳಿತು ತಾನು ಕಟ್ಟಿದ ಹೂಮಾಲೆಯನ್ನು ಅಲ್ಲಿಂದ ನೀರಿಗೆಸೆದು, ತಮಾಷೆ ನೋಡುತ್ತಿದ್ದಳು. ಆಗ ಆ ಹೂವಿನ ಹಾರ ತೇಲಿಕೊಂಡು ಹೋಗಿ

ಸ್ನಾನಮಾಡುತ್ತಿದ್ದ ಕಿರಿಕಳಿಂಗನ ತಲೆಗೆ ತಾಕಿತು. ಚಟಕ್ಕನೆ ಅದನ್ನು ಆತನು ಕೈಗೆ ತೆಗೆದುಕೊಂಡು, "ಎಷ್ಟು ಸುಂದರವಾದ ಮಾಲೆ. ಎಷ್ಟು ಬಗೆಯ ಪುಷ್ಪಗಳು! ಹಾ! ಇದನ್ನು ಇಷ್ಟು ಚೆನ್ನಾಗಿ, ಸೊಂಪಾಗಿ ಪೋಣಿಸಿದಾಕೆ ಅಪೂರ್ವ ಅಂದಗಾತಿಯಾಗಿರಬೇಕು. ಈ ಮಹಾರಣ್ಯದಲ್ಲಿ ಅಂತಹ ಅನುಪಮಸುಂದರಿಗೆ ಕೆಲಸವೇನಿರಬಹುದು?" ಎಂದು ಯೋಚಿಸಲಾರಂಭಿಸಿದನು. ಪೂಮಾಲೆಯನ್ನು ಹೆಣೆದ ಸುಂದರಿಯನ್ನು ಕಂಡುಹಿಡಿಯಲೇಬೇಕೆಂದು ಆತನ ಮನಸ್ಸು ಒಂದೇಸವನೆ ಕಾತುರಪಡುತಿತ್ತು.

ಕಳಿಂಗನು ಈ ಉದ್ದೇಶದಿಂದ ಹೋಗುತ್ತಿರಲು ಒಂದು ದಿಕ್ಕಿನಿಂದ ಮಂಜುಳವಾದ ಕಂಠಸ್ವರ ಕೇಳಿಬಂದಿತು. ತಟಕ್ಕನೆ ಅಲ್ಲೇ ನಿಂತು ಸ್ವಲ್ಪ ಹೊತ್ತು ಅತ್ತಿತ್ತ ನೋಡಲು ಮಾವಿನಮರದ ಕೊಂಬೆಯಮೇಲೆ ಕುಳಿತು ಉಲ್ಲಾಸವಾಗಿ ಹಾಡುತ್ತಿದ್ದ ಅತ್ಯಂತ ಸುಂದರಿಯೊಬ್ಬಳು ಕಾಣಿಸಿದಳು.

ರಾಜಪುತ್ರಿಯನ್ನು ಕಂಡಕೂಡಲೇ ಕಳಿಂಗನು ಪರವಶನಾದನು. ಆಕೆಯ ಬಳಿಸಾರಿ ಕುಶಲಪ್ರಶ್ನೆಗಳನ್ನು ಹಾಕಿದನು. ಮಾತಿನ ಸಂದರ್ಭದಲ್ಲಿ ಆಕೆಯನ್ನು ತನ್ನ ಪತ್ನಿಯನ್ನಾಗಿ ಮಾಡಿಕೊಳ್ಳುವ ಉದ್ದೇಶವನ್ನು ಹೊರಪಡಿಸಿದನು. ಅದಕ್ಕೆ ಆಕೆ "ನೀವು ಋಷಿಸಂತತಿಗೆ ಸೇರಿದವರು, ನಾವು ಕ್ಷತ್ರಿಯ ಕುಲಸ್ಥರು" ಎಂದು ಸೂಚಿಸಿದಳು. ಕೂಡಲೇ ಕಳಿಂಗನು, "ನಾನೂ ಸಹ ಕ್ಷತ್ರಿಯವಂಶದವನೇ!" ಎಂದು ತನ್ನ ರಹಸ್ಯವನ್ನು ಹೊರಪಡಿಸಿದನು.



ಇಬ್ಬರೂ ಒಟ್ಟಿಗೆ ಆಕೆಯ ತಂದೆತಾಯಿಗಳ ಬಳಿಗೆ ಹೋಗಲು, ಮಗಧರಾಜನು ಸಂಗತಿ ಸಂದರ್ಭಗಳನ್ನು ತಿಳಿದುಕೊಂಡು "ಈತನೇ ನಮ್ಮ ಮಗಳಿಗೆ ಯೋಗ್ಯ ವರನು" ಎಂದು ನಿರ್ಧರಿಸಿದನು. ಕಿರಿಯ ಕಳಿಂಗ ಮತ್ತು ಮಗಧ ರಾಜಕುಮಾರಿಗೆ ವಿವಾಹ ನಡೆಯಿತು.

ಕೆಲವು ತಿಂಗಳುಗಳಾದಬಳಿಕ ಅವರಿಗೆ ಒಬ್ಬ ಮಗನು ಜನಿಸಿದನು. ಉತ್ತಮ ರಾಜಲಕ್ಷಣ ಗಳಿಂದ ಶೋಭಿಸುತ್ತಿದ್ದ ಆ ಮಗುವಿಗೆ "ವಿಜಯ ಕಳಿಂಗ" ಎಂದು ನಾಮಕರಣ ಮಾಡಿ, ಅತಿ ಮಮತೆಯಿಂದ ಸಲಹುತ್ತಿದ್ದರು.

ಮತ್ತಷ್ಟು ದಿನಗಳು ಕಳೆದ ತರುವಾಯ ಒಂದು ದಿನ ಕಳಿಂಗನು ಜಾತಕಗಳನ್ನು ಹೊರ ತೆಗೆದು, ಗ್ರಹಕೂಟಗಳ ಸ್ಥಿತಿಗತಿಗಳನ್ನು ಗುಣಿಸಿ ನೋಡಿದ. ಆ ವೇಳೆಗಾಗಲೇ ತನ್ನ ಅಣ್ಣನ ಆಯುಸ್ಸು ಮುಗಿದಿರಬೇಕೆಂದು ತಿಳಿದು ಬಂತು.

ಆಗ ಕಳಿಂಗನು ಮಗನನ್ನು ಆಲಿಂಗಿಸಿ "ಮಗೂ, ನೀನು ಬಾಳಬೇಕಾದುದು ಈ ಅರಣ್ಯದಲ್ಲಲ್ಲ. ನನ್ನ ಅಣ್ಣ ಹಿರಿಯ ಕಳಿಂಗನು ದಾಂತಿಪುರದ ಒಡೆಯ. ಆ ರಾಜ್ಯಕ್ಕೆ ವಾರಸುದಾರನು ನೀನು. ಆದುದರಿಂದ ಕೂಡಲೇ ಹೋಗಿ ಆ ಸಿಂಹಾಸನವನ್ನು ಅಲಂಕರಿಸು," ಎಂದು ಹೇಳಿ, ವೃದ್ಧಮಂತ್ರಿಯ ಪರಿಚಯವನ್ನು ಹೇಳಿ ಮೂರು ವಸ್ತುಗಳನ್ನು ಗುರುತಿಗಾಗಿ ಕೊಟ್ಟು ಆಶೀರ್ವದಮಾಡಿದನು.

ತಂದೆತಾಯಿಗಳ ಮತ್ತು ಅಜ್ಜಿ ಅಜ್ಜಂದಿರ ಹತ್ತಿರ ಅಪ್ಪಣೆ ಪಡೆದು ವಿಜಯ ಕಳಿಂಗನು ದಾಂತಿಪುರವನ್ನು ಸೇರಿ, ವೃದ್ಧಮಂತ್ರಿಯನ್ನು ಭೇಟಿಮಾಡಿ, ತನ್ನ ಪರಿಚಯವನ್ನು ತಿಳಿಸಿದನು.

ಕಿರಿಯ ಕಳಿಂಗನ ಅಂದಾಜಿನಂತೆ ಆವೇಳೆಗೆ ಹಿರಿಯ ಕಳಿಂಗನು ಮರಣಹೊಂದಿದ್ದನು. ದಾಂತಿಪುರ ಅರಾಜಕ ಸ್ಥಿತಿಯಲ್ಲಿತ್ತು.

ಒಂದು ಮಹಾಸಭೆಯನ್ನು ಸೇರಿಸಿ ವೃದ್ಧ ಮಂತ್ರಿ ವಿಜಯ ಕಳಿಂಗನ ಪೂರ್ವೋತ್ತರಗಳನ್ನು ಸಭಿಕರಿಗೆ ತಿಳಿಸಲು ಅವರೆಲ್ಲರೂ ಆಶ್ಚರ್ಯ ಚಕಿತರಾಗಿ ಜಯಕಾರ ಮಾಡಿದರು.

ವೃದ್ಧಮಂತ್ರಿಯಾದ ಬೋಧಿಸತ್ವನ ಸಲಹೆಯಮೇರೆಗೆ ವಿಜಯ ಕಳಿಂಗನು ಉತ್ತಮ ರೀತಿಯಲ್ಲಿ ರಾಜ್ಯಭಾರವನ್ನುಮಾಡಿ, ಹಿರಿಯರ ಹೆಸರನ್ನು ಉಳಿಸಿದನು.



# ಅದಲು ಬದಲು



**ಭೋ**ಜರಾಜನು ಕವಿಗಳನ್ನೂ, ಪಂಡಿತರನ್ನೂ ಸತ್ಕರಿಸುತ್ತಾ ಧಾರಾನಗರದಲ್ಲಿ ಪರಿಪಾಲನೆ ಮಾಡುತ್ತಿದ್ದ ಕಾಲ. ಆಗ ಮಾಳವದೇಶದಲ್ಲಿ ತುಂಬಾ ಬಡವನಾದ ಒಬ್ಬ ಬ್ರಾಹ್ಮಣನಿದ್ದ. ಆ ಬ್ರಾಹ್ಮಣನು ಕವಿಯೂ ಅಲ್ಲ, ಪಂಡಿತನೂ ಅಲ್ಲ. ಆದರಿಂದಾಗಿ ಭೋಜರಾಜನು ಅವನನ್ನು ಸನ್ಮಾನಿಸುವ ಅವಕಾಶವಿಲ್ಲ.

ಕಾಳಿದಾಸನು ಬಯಸಿದರೆ ತನ್ನಂತಹ ವರಿಗೂಸಹ ಯಾವುದೋ ಒಂದುಬಗೆಯಾಗಿ ಸತ್ಕಾರ ಲಭಿಸುವುದೆಂದು ಯಾರಿಂದಲೋ ಕೇಳಿದ ಆ ಬ್ರಾಹ್ಮಣ ಧಾರಾನಗರಕ್ಕೆ ಕಾಲು ನಡಿಗೆಯಲ್ಲಿ ಹೊರಟು, ಕಾಳಿದಾಸನನ್ನು ಭೇಟಿ ಮಾಡಿದ. ಕಾಳಿದಾಸನು ಅವನ ದುಸ್ಥಿತಿಯನ್ನು ಅರಿತು "ಅಯ್ಯಾ, ನೀನು ಮೌನವ್ರತ ಧರಿಸಿ ನಾಳೆ ರಾಜಸಭೆಗೆ ಬಾ. ಬರಿಗೈಯಲ್ಲಿ ಮಾತ್ರ ಬರಬೇಡ. ಯಾವುದೋ ಒಂದು ಕಾಣಿಕೆಯನ್ನು ಮಹಾರಾಜರಿಗೆ ಒಪ್ಪಿಸು. ನಿನ್ನ ಅದೃಷ್ಟ ಚೆನ್ನಾಗಿದ್ದರೆ ಏನಾದರೂ ಸಿಗುವಂತೆ ಪ್ರಯತ್ನಿಸುವೆನು. ನೋಡೋಣ" ಎಂದು ಸಮಾಧಾನಮಾಡಿ ಕಳುಹಿಸಿದ.

ಆ ಬ್ರಾಹ್ಮಣನು ಈ ಸಲಹೆಯನ್ನು ಕೇಳಿ ಸಂತೋಷಿಸಿ, ಎಲ್ಲಿಂದಲೋ ಒಂದು ಕಬ್ಬಿನ ಜಲ್ಲೆಯನ್ನು ಸಂಪಾದಿಸಿದ. ಅದನ್ನು ತುಂಡು ತುಂಡಾಗಿ ಕತ್ತರಿಸಿ ತನ್ನ ಅಂಗವಸ್ತ್ರದಲ್ಲಿ ಮೂಟೆಕಟ್ಟಿಕೊಂಡ. ಆರಾತ್ರಿ ಛತ್ರದಲ್ಲಿ ಭೋಜನಮಾಡಿ ಮೂಟೆಯನ್ನು ಹತ್ತಿರ ಇಟ್ಟುಕೊಂಡು, ಛತ್ರದಮುಂದಿನ ಮರದ ಬುಡದಲ್ಲಿ ಮಲಗಿಕೊಂಡ. ಗಾಢ ನಿದ್ರೆಬಂತು.

ಆ ಛತ್ರ ಊರಿನ ಒಂದುಬದಿಯಲ್ಲಿತ್ತು. ಪ್ರತಿರಾತ್ರಿ ಅಲ್ಲಿ ವಿಶ್ರಮಿಸಿಕೊಳ್ಳಲು, ಸಾಧ್ಯವಾದರೆ ಉಚಿತಭೋಜನ ಮಾಡಲು ಅನೇಕ ಜನರು ಬರುತ್ತಿದ್ದರು.

ಆ ಛತ್ರದಲ್ಲಿ ಮೈಮರೆತು ನಿದ್ರಿಸುವವರ ವಸ್ತು ಮತ್ತು ಹಣವನ್ನು ಹಾರಿಸುವ ಒಬ್ಬ ತುಂಟಹುಡುಗನಿದ್ದ. ಬ್ರಾಹ್ಮಣನ ಮೂಟೆಯಲ್ಲಿ

ಪಿ ಎಸ್. ಶಂಕರಪ್ಪ

ಕಬ್ಬಿನ ತುಂಡುಗಳಿರುವುದನ್ನು ಗ್ರಹಿಸಿದ ಆ ತುಂಟ ಹುಡುಗನು ಬ್ರಾಹ್ಮಣನು ನಿದ್ದೆಮಾಡುವಾಗ ಕಬ್ಬಿನ ತುಂಡುಗಳನ್ನು ಹಾರಿಸಿ, ಅದರ ಬದಲಾಗಿ ಸುಟ್ಟಾರಿದ ಸೌದೆ ತುಂಡುಗಳನ್ನು ಮೂಟೆಕಟ್ಟಿಟ್ಟು ತನ್ನಪಾಡಿಗೆ ತಾನು ಹೊರಟು ಮಾಯವಾಗಿ ಹೋದ.

ಈ ಮೋಸವನ್ನು ತಿಳಿಯದೆ ಆ ಬಡಬ್ರಾಹ್ಮಣನು ಮಾರನೇಯ ದಿವಸ ಬೆಳಗ್ಗೆ ಎದ್ದು ಪ್ರಾತರ್ವಿಧಿಗಳನ್ನು ಮುಗಿಸಿಕೊಂಡು ರಾಜಸಭೆಗೆ ಹೊರಟನು.

ಕಾಳಿದಾಸ ಮುಂತಾದ ಪಂಡಿತವರ್ಯರು ಇದ್ದ ತುಂಬುಸಭೆಯಲ್ಲಿ ವಿರಾಜಮಾನನಾಗಿದ್ದ ಭೋಜರಾಜನೊಂದಿಗೆ ದ್ವಾರಪಾಲಕನು "ಮಹಾಪ್ರಭೊ, ತಮ್ಮ ದರ್ಶನಕ್ಕಾಗಿ ಮೌನವ್ರತಧಾರಿಯಾದ ಒಬ್ಬ ಬ್ರಾಹ್ಮಣ ಬಂದಿರುತ್ತಾನೆ" ಎಂದು ಅರಿಕೆಮಾಡಿದ. ಆತನನ್ನು ಒಳಗೆ ಕಳುಹಿಸುವಂತೆ ರಾಜಾಜ್ಞೆಯಾಯಿತು.

ಬ್ರಾಹ್ಮಣನು ಸಭೆಗೆ ಬಂದು, ಮೂಟೆಯನ್ನು ಬಿಚ್ಚಿದನು. ಅದರಲ್ಲಿದ್ದ ಸುಟ್ಟಕಟ್ಟಿಗೆ ತುಂಡುಗಳನ್ನು ನೋಡಿದಕೂಡಲೇ ಬ್ರಾಹ್ಮಣನಿಗೆ ಪ್ರಾಣವೇ ಹಾರಿಹೋದಂತಾಯಿತು. ಸಭಿಕರೆಲ್ಲರೂ ಪರಿಹಾಸಮಾಡಿದರು.

ರಾಜನಿಗೆ ಅಪಾರ ಕೋಪ ಬಂತು. "ಇದರ ಅರ್ಥವೇನು?" ಎಂದು ತಪ್ತನಾಗಿ ಕೇಳಿದ.

ಎಲ್ಲರೂ ಮೌನವಾಗಿದ್ದರು. ಆಗ ಕಾಳಿದಾಸನು ತನ್ನ ಪೀಠದಿಂದ ಎದ್ದುನಿಂತು "ಪ್ರಭೊ, ಇದರಲ್ಲಿ ಭಾರಿ ಗೂಢಾರ್ಥವಿದೆ. ತಮ್ಮ ಅಪ್ಪಣೆಯಾದರೆ ವಿವರಿಸಿ ಹೇಳುವೆನು" ಎಂದ.



"ಏನದು?" ಆಶ್ಚರ್ಯದಿಂದ ಕೇಳಿದ ರಾಜ.
ಅದಕ್ಕೆ ಕಾಳಿದಾಸನು ಈ ರೀತಿ ಹೇಳಿದ:

ದಗ್ಧಂ ಖಾಂಡವ ಮರ್ಜುನೇನ ಚ ವೃಥಾ
ದಿವ್ಯದ್ರುಮೈ ರ್ಭೂಷಿತಂ,
ದಗ್ಧಾ ವಾಯುಸುತೇನ ಹೇಮರಚಿತಾ
ಲಂಕಾಪುರಿ ಸ್ವರ್ಗಭೂಃ,
ದಗ್ಧ ಸ್ಸರ್ವ ಸುಖಾಸ್ಪದಶ್ಚ ಮದನೋ
ಹಾ! ಹಾ!! ವೃಥಾಶಂಭುನಾ
ದಾರಿದ್ರ್ಯಂ ಘನತಾಪದಂ ಭುವಿನೃಣಾಂ
ಕೇನಾಪಿ ನೋ ದಹ್ಯತೇ.

ದಿವ್ಯವೃಕ್ಷಗಳಿದ್ದ ಖಾಂಡವ ವನವನ್ನು ಅರ್ಜುನನು ಅಕಾರಣವಾಗಿ ದಹಿಸಿದ. ಸ್ವರ್ಗವನ್ನು ಮೀರಿಸಬಲ್ಲ ಲಂಕಾಪಟ್ಟಣವನ್ನು ಹನುಮಂತನು ನಿಷ್ಕಾರಣವಾಗಿ ದಹಿಸಿದನು. ಎಲ್ಲರಿಗೂ ಸುಖನೀಡುವ ಮನ್ಮಥನನ್ನು ಮಹಾಶಿವನು ನಿರ್ದಯನಾಗಿ ಭಸ್ಮಮಾಡಿದ. ಆದರೂ ಮಾನವರನ್ನು ಪೀಡಿಸುತ್ತಿರುವ ದಾರಿದ್ರ್ಯವನ್ನು ಯಾವ ಮಹಾನುಭಾವನೂ ದಹಿಸಿಲ್ಲವಲ್ಲ! ಈ ಕಾರ್ಯವನ್ನು ತಾವಾದರೂ ಮಾಡಬಾರದೇ ಎಂದು ಈ ಬ್ರಾಹ್ಮಣನು ತಮ್ಮನ್ನು ಎಚ್ಚರಿಸುತ್ತಿರುವನು. ಬಡವನಾದರೂ ಇವನ ಮಿದಳಿಗೆ ಬಡತನವಿಲ್ಲ." ಈ ವಿವರಣೆಯನ್ನು ಕೇಳಿ ರಾಜನು ತುಂಬಾ ಸಂತೋಷಿಸಿ ಬ್ರಾಹ್ಮಣನಿಗೆ ಭಾರಿ ಬಹುಮಾನವನ್ನಿತ್ತು ಬೀಳ್ಕೊಟ್ಟನು.

ತಾನು ಮಾಡಿದ ಕಾರ್ಯಕ್ಕೆ ದಂಡನೆಯಾಗ ಬಹುದೆಂದು ಭೀತಿಗೊಂಡಿದ್ದ ಆ ಬ್ರಾಹ್ಮಣ. ಅದರಬದಲು ಅಪಾರಸನ್ಮಾನ ದೊರೆಯಿತು. ಆ ಸ್ಥಿತಿಯಲ್ಲಿ ತನ್ನ ಕಣ್ಣುಗಳನ್ನು ತಾನೇ ನಂಬಲಾರದವನಾದ ಬ್ರಾಹ್ಮಣ ಹಿಂತಿರುಗಿ ನೋಡುತ್ತಾ ಅಪರಾಧ ಮಾಡಿದವನಂತೆ ಸಭೆಯಿಂದ ಹೊರಬಿದ್ದ.

"ಆ ಬ್ರಾಹ್ಮಣನು ಆರೀತಿ ಹಿಂತಿರುಗಿ ನೋಡುತ್ತಾ ಹೋಗಲು ಕಾರಣವೇನು?" ಎಂದು ರಾಜನು ಕಾಳಿದಾಸನನ್ನು ಕೇಳಿದ.

"ನೀವು ದಹಿಸಿದ ದರಿದ್ರದೇವತೆ ಮತ್ತೆ ತನ್ನೊಂದಿಗೆ ಎಲ್ಲಿ ಬರುವುದೋ ಎಂದು ಆ ಬ್ರಾಹ್ಮಣನು ಭಯಪಡುತ್ತಿದ್ದಾನೆ" ಎಂದು ಯುಕ್ತಿಪೂರಿತವಾದ ಉತ್ತರಕೊಟ್ಟ ಕಾಳಿದಾಸ.

ಇದನ್ನು ಕೇಳಿ ಭೋಜರಾಜನು ತೃಪ್ತನಾದ. ಕಾಳಿದಾಸನ ಪ್ರತಿಭೆಗೆ ಈಡುಂಟೆ?





# ಬೇಸ್ತು

ಒಂದುದಿನ ಒಬ್ಬಾತ ಬೀದಿಯಲ್ಲಿ ಸೌತೆಕಾಯಿ ಮೂಟೆಯನ್ನು ತಲೆಯಮೇಲೆ ಹೊತ್ತುಕೊಂಡು "ಸೌತೇಕಾಯಿ ಬೇಕೇ ಸೌತೆಕಾಯಿ" ಎಂದು ಕೂಗುತ್ತಾ ಹೋಗುತ್ತಿರಲು ಸೋಮಾರಿ ಸೋಮಯ್ಯನೊಬ್ಬನು ಎದುರಾಗಿ ಆ ಸೆಟ್ಟಿಯನ್ನು ಅರ್ಥವಿಲ್ಲದ ಪ್ರಶ್ನೆಗಳನ್ನು ಕೇಳಲು ಪ್ರಾರಂಭಿಸಿದ. ಆ ಸೆಟ್ಟಿಗೆ ಬೇಸರವಾಗಿ "ಬೋ ದೊಡ್ಡ ಗಿರಾಕಿ ಈತ, ನಡಿಯಪ್ಪಾ" ಎಂದು ಮೂದಲಿಸಿದ. ಸೋಮಯ್ಯನಿಗೆ ಆಕ್ರೋಶ ಬಂತು.

"ನಮ್ಮ ವಿಷಯ ನಿನಗೆ ತಿಳಿಯದೆಂದು ತೋರುತ್ತೆ. ಸರಿಯಾದ ದರ ಹೇಳು. ಆ ಮೂಟೆ ಸೌತೇಕಾಯಿಯನ್ನು ತಿಂದುಬಿಡುತ್ತೇನೆ" ಎಂದು ಸವಾಲು ಹಾಕಿದ ಸೋಮಯ್ಯ.

"ನಿನ್ನಂತಹ ಮಹಾನುಭಾವರು ನಾಲ್ಕರು ಬಂದರೆ ಆಗ ಆ ಮಾತು" ಎಂದ ಸೆಟ್ಟಿ.

"ಪಂದ್ಯಕಟ್ಟು ಬೇಕಾದರೆ" ಎಂದ ಸೋಮಯ್ಯ. "ನೀನು ಈ ಸೌತೇಕಾಯಿಗಳನ್ನೆಲ್ಲಾ ತಿಂದೆಯಾದರೆ ನಿನಗೆ ನಾನು ಬಾಗಿಲು ನುಗ್ಗಲಾರದಷ್ಟು ಲಡ್ಡು ಕೊಡುತ್ತೇನೆ" ಎಂದ.

"ಕೊಡಲಾರೆ. ಹತ್ತುರೂಪಾಯಿ ದಂಪ್ಯವಿರಲಿ" ಎಂದ ಸೋಮಾರಿ ಸೋಮಯ್ಯ.

"ನೀನು ಈ ಸೌತೆಕಾಯಿಗಳನ್ನೆಲ್ಲಾ ತಿಂದರೆ ಆ ಮಾತು" ಎಂದ ಸೆಟ್ಟಿ.

"ಮೂಟೆ ಇಳಿಸು" ಎಂದು ಹೇಳಿ ಸೋಮಾರಿ ಸೋಮಯ್ಯ ಮೂಟೆಯಲ್ಲಿದ್ದ ಒಂದೊಂದು ಸೌತೇಕಾಯಿಯನ್ನು ನೆಪಮಾತ್ರಕ್ಕೆ ಕಚ್ಚಿ ಕಚ್ಚಿ ಉಗಿದುಬಿಟ್ಟ. "ಏನು ಹುಡುಗಾಟವೊ?" ಎಂದ ಸೆಟ್ಟಿ ಸಿಟ್ಟಾಗಿ.

"ಹುಡುಗಾಟವೇನು ಬಂತು ಇದರಲ್ಲಿ. ನಿನ್ನ ಸೌತೇಕಾಯಿಗಳನ್ನೆಲ್ಲಾ ತಿಂದುಬಿಟ್ಟೆ. ಬಾಗಿಲು ನುಗ್ಗಲಾರದಷ್ಟು ಲಡ್ಡು ಕೊಡು" ಎಂದ ಸೋಮಾರಿ ಸೋಮಯ್ಯ.

"ತಿನ್ನುವುದೆಂದರೆ ಇದೆಯೋ?" ಎಂದ ಸೆಟ್ಟಿ.

"ಯಾರಿಗಾದರೂ ಮಾರಲು ಪ್ರಯತ್ನಿಸು ಏನು ಹೇಳುವರೋ ತಿಳಿಯುತ್ತೆ" ಎಂದ ಸೋಮಾರಿ ಸೋಮಯ್ಯ

ಆ ವೇಳೆಗೆ ಸುತ್ತ ಜನ ಸೇರಿದರು. ಆ ಕಾಯಿಗಳೆಲ್ಲ ತಿಂದುಹಾಕಿದ ಕಾಯಿಗಳೆಂದು ಜನ

ಕೆ. ರಮಾನಂದ

ಒಪ್ಪಿಕೊಂಡರು. ಮತ್ತೇನೂ ಮಾಡಲಾರದ ಸೌತೇಕಾಯಿ ವರ್ತಕನು ತನ್ನ ಚೀಲ ತೆಗೆದು ಕೊಂಡು ಹೋಗಲು ಸಿದ್ಧನಾದನು. ಆದರೆ ಸೋಮಾರಿ ಸೋಮಯ್ಯ ಅಡ್ಡಹಾಕಿ "ಲಡ್ಡಿನ ಮಾತೇನಾಯಿತು?" ಎಂದ.

"ಬಾಗಿಲು ನುಗ್ಗಲಾಗದ ಲಡ್ಡು ಆತಮಾತ್ರ ಎಲ್ಲಿಂದ ತರುತ್ತಾನೆ ಪಾಪ. ಪಂದ್ಯ ಸೋತು ಹೋದುದಕ್ಕೆ ಒಂದು ರೂಪಾಯಿ ಕೊಡ್ತಾನೆ ಬಿಡು" ಎಂದರು ಅಲ್ಲಿ ನೆರೆದಿದ್ದವರು. "ಅದೆಲ್ಲಾ ಆಗದು. ಹತ್ತುರೂಪಾಯಿ ಎಣಿಸಿಬಿಡಬೇಕು" ಎಂದ ಸೋಮಯ್ಯ. "ಹಾಗಾದರೆ ಬಾಗಿಲು ನುಗ್ಗದ ಲಡ್ಡು ತರುತ್ತೇನೆ ಇರು" ಎಂದು ಸೌತೆಕಾಯಿ ವರ್ತಕನು, ಪಕ್ಕದಲ್ಲೇ ಇದ್ದ ಮಿಠಾಯಿ ಅಂಗಡಿಗೆ ಹೋಗಿ, ಅರ್ಧಾಣೆಕೊಟ್ಟು ಒಂದು ಬೆಲ್ಲದ ಲಡ್ಡು ತಂದ. "ಇದೇಯೋ ಬಾಗಿಲು ನುಗ್ಗದ ಲಡ್ಡು?" ಎಂದು ಸೋಮಾರಿ ಸೋಮಯ್ಯ ಕುಚೋದ್ಯಮಾಡಿದ.

"ಮತ್ತೇನೆಂದು ತಿಳಿದಿರುವೆ? ನಿನ್ನಿಷ್ಟ ಬಂದ ಬಾಗಿಲನ್ನು ತೋರಿಸು. ನುಗ್ಗುವುದಿಲ್ಲ ವೆಂದು ತೋರಿಸಿಕೊಡುತ್ತೇನೆ" ಎಂದ ಸೆಟ್ಟಿ.

ಎಲ್ಲರೂ ಪಕ್ಕದಲ್ಲಿದ್ದ ಮನೆಯ ಬಾಗಿಲಿನ ಹತ್ತಿರ ಹೋದರು. ಸೌತೆಕಾಯಿ ಮಾರುವಾತ ಲಡ್ಡನ್ನು ಬಾಗಿಲಿನ ಆಚೆಯಿಟ್ಟು "ನುಗ್ಗು" ಎಂದ. ಲಡ್ಡು ಕದಲಲಿಲ್ಲ.

"ನೋಡಿದೆಯೋ? ಬಾಗಿಲು ನುಗ್ಗುವುದಿಲ್ಲ," ಎಂದ ಸೌತೆಕಾಯಿ ಮಾರುವಾತ. ಆ ಮಾತು ಗಳನ್ನು ಕೇಳಿ ಸೋಮಾರಿ ಸೋಮಯ್ಯನಿಗೆ ವಿಪರೀತ ಕೋಪಬಂತು. ಸುತ್ತಿ ಸೇರಿದ್ದವರೆಲ್ಲರೂ "ಆತನು ಹೇಳಿದ್ದು ನಿಜ" ಎಂದರು.

"ಹಾಗಾದರೆ ಸರಿ" ಎಂದು ಗೊಣಗುತ್ತಾ ಸೋಮಯ್ಯ ಮೆಲ್ಲನೆ ಜಾರಿಕೊಳ್ಳಲು ಹವಣಿಸಿದ. ಸೌತೆಕಾಯಮಾರುವಾತ ಅಡ್ಡ ಬಂದು "ನೀನು ಪಂದ್ಯಸೋತುಹೋದೆ. ಹತ್ತು ರೂಪಾಯಿಬಿಚ್ಚು" ಎಂದ.

ಸೋಮಯ್ಯನ ಆಟ ಸಾಗದಾಯಿತು. ಹತ್ತು ರೂಪಾಯಿ ತೆಗೆದುಕೊಟ್ಟು, ಹೆಚ್ಚು ಮಾತನಾಡಿದುದಕ್ಕೆ ತಕ್ಕಶಾಸ್ತಿ ಆಯಿತೆಂದುಕೊಂಡು ತನ್ನದಾರಿ ಹಿಡಿದ." ಈದಿನ ಎದ್ದಗಳಿಗೆ ಒಳ್ಳೆಯದು" ಎಂದುಕೊಳ್ಳುತ್ತಾ ನಡೆದ ಸೌತೆಕಾಯಿ ಮಾರುವಾತ.





# ಎರಡು ಕನಸುಗಳು

**ಪೂ**ರ್ವಕಾಲದಲ್ಲಿ ಒಂದು ದೇಶದಲ್ಲಿ ಒಬ್ಬಾನೊಬ್ಬ ಧನಿಕನಿದ್ದನು. ಅವನು ಕಡು ಲೋಭಿ. ಮದುವೆಯಾಗಿ ಮಕ್ಕಳನ್ನು ಪಡೆದರೆ ಅವರು ತನ್ನ ಹಣವನ್ನೆಲ್ಲಾ ಹಂಚಿಕೊಳ್ಳುವರೆಂಬ ಅಂಜಿಕೆಯಿಂದ ಬ್ರಹ್ಮಚಾರಿಯಾಗಿಯೇ ಜೀವಿಸುತ್ತಿದ್ದ. ತನಗೆ ಅಡಿಗೆ ಮಾಡಿಡಲು ಒಬ್ಬ ನೌಕರನನ್ನು ನೇಮಿಸಿಕೊಂಡಿದ್ದ. ಅಷ್ಟೊಂದು ಹಣವಿದ್ದರೂ ಹೊಟ್ಟೆತುಂಬಾ ತಾನೂ ತಿನ್ನುತ್ತಿರಲಿಲ್ಲ; ತನ್ನ ನೌಕರನನ್ನೂ ತಿನ್ನಗೊಡಿಸುತ್ತಿರಲಿಲ್ಲ.

ಹೀಗಿರಲು ಉಗಾದಿ ಹಬ್ಬ ಬಂತು. ನೌಕರನು ಯಜಮಾನನಿಗೆ ತಿಳಿಯದಂತೆ ತನಗೆ ಮತ್ತು ಯಜಮಾನನಿಗೆ ಸಾಕಾಗುವಷ್ಟು ಬಗೆಬಗೆಯ ತಿಂಡಿ ತಿನಸುಗಳನ್ನು ತಯಾರಿಸಿದ. ಊಟಕ್ಕೆ ಕೂಡುವ ಮೊದಲು ಯಜಮಾನನು ಬಗೆಬಗೆಯ ಖಾದ್ಯಗಳನ್ನು ನೋಡಿ ಎದೆಬಿರಿದು "ಯಾಕೋ ಇವನ್ನೆಲ್ಲಾ ಮಾಡಿದೆ?" ಎಂದು ಕೇಳಿದ. "ಉಗಾದಿ ಹಬ್ಬವಲ್ಲವೇ? ವರ್ಷಕ್ಕೆ ಒಂದು ದಿನವಾದರೂ ಹೊಟ್ಟೆ ತುಂಬಾ ಊಟ ಮಾಡೋಣ" ಎಂದ ಅಡಿಗೆಯಾಳು.

"ನಿಜ ನಿಜ" ಎಂದೆನ್ನುತ್ತಾ ಯಜಮಾನನು ಮಾಡಿದ ಅಡಿಗೆಯಲ್ಲಿ ಮುಕ್ಕಾಲು ಮೂರು ಪಾಲನ್ನು ಬಲವಂತದಿಂದ ತಿಂದು ಮುಗಿಸಿದ. ಉಳಿಸಿದರೆ ಎಲ್ಲಿ ಅಡಿಗೆಯವನು ತಿಂದುಬಿಡುವನೋ ಎಂಬ ಗಾಬರಿ. ಆದರೂ ಜಿಲೇಬಿ ಬಹಳ ಉಳಿದುಹೋಯಿತು. ಯಜಮಾನ ತನ್ನ ನೌಕರನು ಜಿಲೇಬಿ ತಿನ್ನದಂತೆ ಮಾಡಲು ಒಂದು ಉಪಾಯ ಹೂಡಿದ. "ಲೋ, ಈ ಜಿಲೇಬಿ ಇನ್ನಷ್ಟು ಹೊತ್ತು ಪಾಕದಲ್ಲಿ ನೆನೆಯಬೇಕು. ಬಹುಶಃ ರಾತ್ರಿಗೆ ಸರಿಹೋಗಬಹುದು. ಅದುವರೆವಿಗೂ ಮುಟ್ಟಬೇಡ, ತಿಳಿಯಿತೇ" ಎಂದ ಯಜಮಾನ. "ನಿಮ್ಮಿಷ್ಟ. ರಾತ್ರಿಗೇನೇ ತಿನ್ನೋಣ" ಎಂದ ನೌಕರ.

ಹಗಲು ಹೊಟ್ಟೆಬಿರಿಯುವಂತೆ ತಿಂದಿದ್ದನಾದುದರಿಂದ ಯಜಮಾನನಿಗೆ ರಾತ್ರಿ ಹಸಿವಾಗಲಿಲ್ಲ. ಯಜಮಾನನು ನೌಕರನೊಂದಿಗೆ "ಲೋ ಈ ಜಿಲೇಬಿಯನ್ನು ನಾವು ಈಗಲೂ ಮುಟ್ಟಬಾರದು. ಇಂದು ಹೊಸ ವರ್ಷದ ಪ್ರಾರಂಭ ದಿವಸವಲ್ಲವೇ? ನಮ್ಮಿಬ್ಬರಲ್ಲಿ ಈ ರಾತ್ರಿ ಯಾ

ಕುಮಾರಿ ಸರಸ್ವತಿ

ರಿಗೆ ಒಳ್ಳೇ ಕನಸಾದರೆ ಅವರಿಗೆ ನಾಳೆ ಈ ಜಿಲೇಬಿ ಬಹುಮಾನ. ಸರಿಯೋ?" ಎಂದ.

"ಹಾಗೆ ಆಗಲಿ" ಎಂದ ನೌಕರ.

ಆ ರಾತ್ರಿ ಜಿಲೇಬಿ ನೌಕರನ ಬಾಯಿಗೆ ಬೀಳದಂತೆ ತಡೆದರೆ ನಾಳೆ ತನಗೆ ಚುರಚುರನೆ ಹಸಿವಾಗುವುದು. ಒಳ್ಳೆಯ ಕನಸು ಬಿತ್ತೆಂದು ಒಂದು ಕಥೆ ಕಲ್ಪಿಸಿ ಹೇಳಿ, ತಾನೇ ಆ ಜಿಲೇಬಿಯನ್ನು ತಿಂದು ಮುಗಿಸಬಹುದೆಂದು ಯಜಮಾನನ ಹಂಚಿಕೆ. ಹೀಗೆಂದು ಯೋಚಿಸಿಕೊಂಡು ಆತ ಮಲಗಿ ನಿದ್ದೆಮಾಡಿದ.

ಯಜಮಾನನು ಗೊರಕೆಯಿಡುವುದು ಕೇಳಿಸಿದಕೂಡಲೇ ನೌಕರನು ಅಡಿಗೆಮನೆಗೆ ನುಗ್ಗಿ ಜಿಲೇಬಿಯನ್ನೆಲ್ಲಾ ತಿಂದು, ಪಾಕವನ್ನಷ್ಟು ಕುಡಿದು ತಾನೂ ಮಲಗಿಕೊಂಡ.

ಮಾರನೇಯ ದಿನ ಎಚ್ಚೆತ್ತಾಗ ಯಜಮಾನನಿಗೆ ಮಾಮೂಲಾಗಿ ಹಸಿವಾದಂತೆ ತೋರಿತು. ಆತನು ನೌಕರನನ್ನು ಕರೆದು "ಏನೋ, ರಾತ್ರಿ ನಿನಗೇನು ಕನಸಾಯಿತು?" ಎಂದು ಕೇಳಿದ.

"ಯಾಕೆ ಕೇಳುತ್ತೀರಿ ಬಿಡಿಸ್ವಾಮಿ. ಹಾಳು ಕನಸು" ಎಂದ ನೌಕರ. ಯಜಮಾನನು ಆನಂದದಿಂದ "ನನಗೆಂತಹ ಸೊಗುಸಾದ ಕನಸು ಬಿತ್ತು ಗೊತ್ತೇ? ರಾಜನು ನನಗೆ ತನ್ನ ಕುವರಿಯನ್ನು ಕೊಟ್ಟು ವಿವಾಹಮಾಡಿ ಪಟ್ಟಾಭಿಷೇಕ ಮಾಡಿಸಿದ. ಪಕ್ಕದಲ್ಲಿ ದಾಸೀಜನ ಚಾಮರ ಹಾಕುತ್ತಿದ್ದರು. ಸಭೆ ತುಂಬಿ ತುಳುಕುತಿತ್ತು. ಎದುರಿನಲ್ಲಿ ನರ್ತಕಿಯರು ನರ್ತನಮಾಡುತ್ತಿದ್ದರು. ಆಹಾ, ಏನು ವೈಭವ, ಏನು ದೃಶ್ಯ! ಸರಿ ನಿನ್ನ ಕನಸಿನ ವಿವರ ಹೇಳುಕೇಳೋಣ"



ನೌಕರನು ಭೀತಿಗೊಂಡವನಂತೆ ಮುಖ ಮುದಡಿಕೊಂಡು "ಅಯ್ಯಾ, ಕಣ್ಣು ಹಾಗೆ ಮುಚ್ಚಿದೆನೋ ಇಲ್ಲವೋ ಕಾಳಿಕಾದೇವಿ ದಡಾರನೆ ಎದುರಾಗಿ ಬಂದು ಸಿಂಹಘರ್ಜನೆ ಮಾಡುತ್ತಾ, ಲೋ ಅಡಿಗೆಮನೆಯಲ್ಲಿರುವ ಜಿಲೇಬಿಯನ್ನು ಈಗಲೇ ತಿನ್ನುವಿಯೋ, ಇಲ್ಲ ನಿನ್ನ ಕುತ್ತಿಗೆಯನ್ನು ಹಿಚುಕಿಬಿಡಲೋ? ಎಂದು ಗದರಿಸಿದಳು. ನನ್ನ ಮೈಯೆಲ್ಲಾ ಬೆವರಿತು. ಅಮ್ಮಾ ತಾಯಿ, ಆ ಜಿಲೇಬಿಯನ್ನು ನಾನು ಮುಟ್ಟುವಂತಿಲ್ಲ. ನನಗೂ ಯಜಮಾನರಿಗೂ ಒಂದು ಒಪ್ಪಂದವಾಗಿದೆ. ಅದರ ಪ್ರಕಾರ ಯಾರಿಗೆ ಒಳ್ಳೆಕನಸಾದರೆ ಅವರು ಅದನ್ನು ತಿನ್ನಲು ಅರ್ಹರಾಗುವರು. ಆದುದರಿಂದ ನನ್ನನ್ನು ಬಲವಂತಮಾಡಬೇಡ. ಕ್ಷಮಿಸಿ ಬಿಡು, ಎಂದು ಪ್ರಾರ್ಥಿಸಿದೆ.

ಆದರೆ ಕಾಳಿಕಾದೇವಿ ನನ್ನನ್ನು ಬಿಡಲಿಲ್ಲ. ತಕ್ಷಣ ಅಡಿಗೆಮನೆಗೆ ಹೋಗಿ ಜಿಲೇಬಿಯನ್ನು ತಿನ್ನುವೆಯೋ, ಇಲ್ಲ ನಿನ್ನನ್ನು ಸೀಳಿ ತಿಂದು ಬಿಡಲೋ, ಎಂದು ಉಗ್ರರೂಪ ತಾಳಿ ಮೇಲೆರಗಿದಳು. ಬೇರೆ ದಾರಿ ಕಾಣದೆ, ಸಿಹಿ ಪದಾರ್ಥಗಳು ನನ್ನ ಮೈಗೆ ಅಷ್ಟಾಗಿ ಒಗ್ಗದಿದ್ದರೂ ಸಹ ಅಡಿಗೆಮನೆಗೆ ಹೋಗಿ ಜಿಲೇಬಿಯನ್ನು ತಿನ್ನಲೇಬೇಕಾಯಿತು" ಎಂದ.

ಯಜಮಾನನು ಕೋಪದಿಂದ ಕುದಿಯುತ್ತಾ "ಎಲವೋ ಮುಠ್ಠಾಳ. ಕಾಳಮ್ಮ ಆರೀತಿ ತೊಂದರೆ ಪಡಿಸಿದಾಗ, ಪಕ್ಕದ ಕೋಣೆಯಲ್ಲಿ ಮಲಗಿದ್ದ ನನಗೆ ಕೇಳಿಸಿರಲೇಬೇಕು. ಅಲ್ಲ, ನೀನಾದರೂ ಒಂದುಸಾರಿ ಕೂಗಿದ್ದರೆ ನಿನ್ನ ಸಹಾಯಕ್ಕೆ ಬರುತ್ತಿದ್ದೆ. ನನ್ನನ್ನೇಕೆ ಕರೆಯಲಿಲ್ಲ," ಎಂದ.

ನೌಕರನು ನಗುತ್ತಾ "ನನಗಷ್ಟು ತಿಳಿಯದೆ! ನಾನು ನಿಮಗಾಗಿ ನೋಡಿದೆ. ನೀವು ರಾಜಸಭೆಯಲ್ಲಿ, ಮಂತ್ರಿಗಳ ನಡುವೆ, ಪಟ್ಟದರಸಿಯ ಪಕ್ಕದಲ್ಲಿ, ನೃತ್ಯ ವಿನೋದಗಳನ್ನು ನೋಡುತ್ತಾ ಸಿಂಹಾಸನದಲ್ಲಿ ಮಂಡಿಸಿದ್ದಿರಿ. ನನ್ನನ್ನು ರಾಜಭಟರು ತಾವಿರುವಲ್ಲಿಗೆ ಹೋಗಲು ಅವಕಾಶ ಕೊಡಲಿಲ್ಲ," ಎಂದ. ಯಜಮಾನನು ನೌಕರನ ಯುಕ್ತಿಗೆ ನಾಚಿ, ತಲೆತಗ್ಗಿಸಿದ. ಅಂದಿನಿಂದ ಅವನೂ ನೌಕರನೂ ಬಗೆ ಬಗೆಯಭಕ್ಷ್ಯಗಳನ್ನು ಮಾಡಿಕೊಂಡು ತಿನ್ನಲು ಪ್ರಾರಂಭಿಸಿದರು.






## 16

[ವ್ಯಾಘ್ರದತ್ತನ ಕಣ್ಣಿಗೆ ಬೀಳದಂತೆ ತಪ್ಪಿಸಿಕೊಂಡ ಸಮರಸೇನನು ಶಿಥಿಲ ನಗರದಲ್ಲಿ ಬಚ್ಚಿಟ್ಟುಕೊಂಡನು. ಅಲ್ಲಿಗೆ ವ್ಯಾಘ್ರದತ್ತನು ತನ್ನ ಭಟರೊಂದಿಗೆ ಬಂದನು. ಶಾಕ್ತೇಯನ ತ್ರಿಶೂಲ ಆನೆಗಳ ವನದಲ್ಲಿದ್ದ ಗುರುದ್ರೋಹಿಯ ಅಸ್ಥಿಪಂಜರದಲ್ಲಿರುವುದೆಂದು ತಿಳಿಯಿತು. ವ್ಯಾಘ್ರದತ್ತನು ಸಮರಸೇನನು ಅವಿತುಕೊಂಡಿದ್ದ ಸ್ಥಳವನ್ನು ನೋಡಿದ. ತರುವಾಯ—]

**ಸ**ಮರಸೇನನು ಮತ್ತು ಸೈನಿಕರು ಅವಿತಿಟ್ಟುಕೊಂಡಿದ್ದ ಸ್ಥಳವನ್ನು ವ್ಯಾಘ್ರದತ್ತನು ಗುರುತಿಸಿದನು. ಶಿಥಿಲ ಭವನದ ಸ್ತಂಭಗಳ ಹಿಂದೆ ಬಚ್ಚಿಟ್ಟುಕೊಂಡಿರುವವರು ಶಿವದತ್ತ ಮತ್ತು ಅವನ ಸಂಗಡಿಗರಿರಬಹುದೆಂದು ಅವನಿಗೆ ಅನುಮಾನವುಂಟಾಯಿತು. ಅವರು ಯಾರೇ ಆಗಿರಲಿ, ಬಂಧಿಸಲೇಬೇಕೆಂದು ವ್ಯಾಘ್ರದತ್ತನು ಖಂಡಿತವಾಗಿ ಮನಸ್ಸು ಮಾಡಿದನು.

ಸಮರಸೇನನೂ ಸಹ ಮುಂದೆ ಬರಬಹುದಾದ ವಿಪತ್ತನ್ನು ಗ್ರಹಿಸಿದನು. ತನ್ನ ಸಂಗಡ ಇದ್ದ ಆರು ಜನ ಸೈನಿಕರೊಂದಿಗೆ ವ್ಯಾಘ್ರದತ್ತನ ಮೇಲೆ ಬೀಳುವುದು ಆತ್ಮಹತ್ಯೆ ಮಾಡಿಕೊಂಡಂತೆ ಆಗುವುದೆಂದು ಭಾವಿಸಿದನು. ಇಂತಹ ಸಮಯದಲ್ಲಿ ತಾನು ತಕ್ಷಣ ಅಲ್ಲಿಂದ ಓಡಿಹೋಗುವುದೇ ಸೂಕ್ತವೆಂದು ಆತನು ನಿರ್ಧರಿಸಿದನು.

ವ್ಯಾಘ್ರದತ್ತನ ಸೈನಿಕರು ಆರ್ಭಟಿಸಿ ಹೆದರಿಸುತ್ತಾ ಗೊಂದಲವನ್ನು ಮಾಡುತ್ತಾ ಸಮರಸೇನನು ಅವಿತುಕೊಂಡಿದ್ದ ಶಿಥಿಲಭವನದ ಕಡೆಗೆ ನುಗ್ಗಿದರು. ಸಮರಸೇನನು ಸೈನಿಕರಿಗೆ ಎಚ್ಚರಿಕೆ ಕೊಟ್ಟು ಅಲ್ಲಿಂದ ತಪ್ಪಿಸಿಕೊಂಡು ಓಡಿಹೋಗಲು ಪ್ರಯತ್ನಿಸಿದನು. ಆದರೆ ಅದು ಬಹಳ ಕಷ್ಟ. ಸಮರಸೇನನೂ ಆತನ ಸೆನಿಕರು ಆರು






ಜನರೂ ಒಂದು ಕಡೆ, ಇಪ್ಪತ್ತುಜನ ಭಟರೂ ಅವರ ನಾಯಕನಾದ ವ್ಯಾಘ್ರದತ್ತನೂ ಮತ್ತೊಂದುಕಡೆ. ಎರಡು ಪಕ್ಷಗಳೂ ಶೂರರ ಪಕ್ಷಗಳೇ. ಆ ಪ್ರದೇಶವೆಲ್ಲಾ ಅವರೆಲ್ಲರ ಗಲಭೆ ಕೂಗಾಟಗಳಿಂದ ಪ್ರತಿಧ್ವನಿಸಿತು.

ಶಿಥಿಲ ಭವನದ ಕೊಠಡಿಗಳಲ್ಲಿ, ಗೋಡೆಗಳ ಮರೆಯಲ್ಲಿ ಅವಿತುಕೊಳ್ಳುತ್ತಾ ಸಮರಸೇನನೂ ಅವನ ಸೈನಿಕರೂ ತಪ್ಪಿಸಿಕೊಳ್ಳಲು ಹವಣಿಸುತ್ತಿದ್ದರು. ಆದರೆ ವ್ಯಾಘ್ರದತ್ತನು ತನ್ನ ಭಟರನ್ನು ಎರಡು ಪಂಗಡಗಳಾಗಿ ವಿಂಗಡಿಸಿ, ತನ್ನ ಶತ್ರುಗಳನ್ನು ಸುತ್ತುವರಿಯಲು ಹುರಿದುಂಬಿಸಿದ. ಈಗ ನಿಜವಾಗಿಯೂ ಸಮರಸೇನನು ಇಕ್ಕಟ್ಟಿಗೆ ಸಿಕ್ಕಿಬಿದ್ದನು. ಧೈರ್ಯವೇ ಆಧಾರವಾಯಿತು. ಮುರಿದಿರುವ ಸ್ತಂಭಗಳ ಮರೆಯಲ್ಲಿ, ಕುಸಿದು ಬಿದ್ದ ಗೋಡೆಗಳ ಪಕ್ಕದಲ್ಲಿ ಹೊಂಚುಕಾಯುತ್ತಾ ತೀರ ಹತ್ತಿರಕ್ಕೆಬಂದ ವ್ಯಾಘ್ರದತ್ತನ ಭಟರನ್ನು ಸಮರಸೇನನೂ, ಆತನ ಸೈನಿಕರೂ ಎದುರಿಸಬೇಕಾಯಿತು. ವ್ಯಾಘ್ರದತ್ತನ ಭಟರಲ್ಲಿ ಕೆಲವರನ್ನಾದರೂ ಸಾಯಿಸಿದ ಹೊರತು, ತಾನೂ ತನ್ನ ಸೈನಿಕರೂ ಅಲ್ಲಿಂದ ಹೊರಬೀಳುವುದು ಅಸಂಭವವೆಂದು ಸಮರಸೇನನು ಮಂದಟ್ಟು ಮಾಡಿಕೊಂಡನು.

ವ್ಯಾಘ್ರದತ್ತನು ತನ್ನ ಭಟರಿಗೆ ಧೈರ್ಯ ಹೇಳುತ್ತಾ ತಾನೇ ಸಮರಸೇನನಮೇಲೆ ಬೀಳಬೇಕೆಂದು ಯೋಚಿಸಿದನು. ಅಷ್ಟರೊಳಗಾಗಲೇ ವ್ಯಾಘ್ರದತ್ತನ ಭಟರಲ್ಲಿ ಐದಾರುಜನ ಸಮರಸೇನನ ಖಡ್ಗಕ್ಕೆ ಬಲಿಯಾಗಿದ್ದರು.

ಎತ್ತನೋಡಿದರೂ ಕಿರಿಚಾಟದಿಂದ, ಗಾಯಗೊಂಡವರ ಆಕ್ರಂದನದಿಂದ ಆ ಪ್ರದೇಶವೆಲ್ಲಾ ಭೀಕರವಾಗಿ ಕಾಣಿಸುತಿತ್ತು. ಸಮರಸೇನನು ಸಾಕ್ಷಾತ್ ಕಾಲರುದ್ರನಂತೆ ತೋರುತ್ತಿದ್ದನು. ಅಂತಹ ಸಮಯದಲ್ಲಿ ವ್ಯಾಘ್ರದತ್ತನು ರಭಸದಿಂದ ಮುಂದಕ್ಕೆ ನುಗ್ಗಿ ಸಮರಸೇನನನ್ನು ಎದುರುಗೊಂಡನು.

ಅತಿ ಶಕ್ತಿವಂತರೂ, ಪರಾಕ್ರಮಿಗಳೂ ಆದ ಸಮರಸೇನ ವ್ಯಾಘ್ರದತ್ತರಿಬ್ಬರಿಗೂ ಖಡ್ಗ ಯುದ್ಧ ಪ್ರಾರಂಭವಾಯಿತು. ಅವರ ಕಾಲಿನ ಅದಿರಾಟಕ್ಕೆ, ಕತ್ತಿಯಘರ್ಷಣೆಗೆ, ಶಿಥಿಲವಾಗಿ ವಾಲಿಕೊಂಡಿದ್ದ ಸ್ತಂಭಗಳೂ, ಗೋಡೆಗಳೂ ಕೆಳಕ್ಕೆ ಕುಸಿದು ಬೀಳತೊಡಗಿದವು. ಕೆಳಕ್ಕೆ ಬೀಳುತ್ತಿರುವ ಗೋಡೆಗಳಿಂದ ಬದಿಗೆ ತಪ್ಪಿಸಿ







ಕೊಳ್ಳುತ್ತಾ ಅವರಿಬ್ಬರೂ ಅತಿ ಭಯಂಕರವಾಗಿ ಹೋರಾಡುತ್ತಿದ್ದರು. ಅವರ ಹೋರಾಟದ ಮುಂದೆ ಉಳಿದವರ ಹೋರಾಟ ಸಪ್ಪೆಯಾಯಿತು.

ಹೀಗೆ ಹೋರಾಟ ಸ್ವಲ್ಪಹೊತ್ತು ನಡೆಯಲು ವ್ಯಾಘ್ರದತ್ತನು ಕ್ರಮೇಣ ಆಯಾಸ ಹೊಂದಿದನು. ಆತನ ಸ್ಥಿತಿಯನ್ನು ಗ್ರಹಿಸಿದ ಸಮರಸೇನನು ತನ್ನ ಶಕ್ತಿಯುಕ್ತಿಗಳಿಂದ ಅವನನ್ನು ಕೊಂದು ಹಾಕಲು ಮುಂದಕ್ಕೆ ನುಗ್ಗಿದನು.

ಅಷ್ಟರಲ್ಲಿ ಸಂಖ್ಯೆಯಲ್ಲಿ ಇಮ್ಮಡಿಯಿದ್ದ ವ್ಯಾಘ್ರದತ್ತನ ಭಟರು ಸಮರಸೇನನ ಸೈನಿಕರನ್ನು ಬಂಧಿಸಿಬಿಟ್ಟರು. ಸೈನಿಕರಲ್ಲಿ ಇಬ್ಬರು ಮೂವರಿಗೆ ತುಂಬಾ ಗಾಯಗಳಾಗಿದ್ದವು. ಆ ರೀತಿ ಸೈನಿಕರನ್ನು ಬಂಧಿಸಿದ ವ್ಯಾಘ್ರದತ್ತನ ಭಟರು ಅನಂತರ ತಮ್ಮ ನಾಯಕನಿಗೆ ಸಹಾಯ ಮಾಡಲಿಕ್ಕಾಗಿ ಹೊರಟರು.

ಇದ್ದಕ್ಕಿದಂತೆ ಎಲ್ಲವೂ ಮೌನವಾದುದನ್ನು ಗಮನಿಸಿದ ಸಮರಸೇನನು ಚಿಂತಾಮಗ್ನನಾದನು. ತನ್ನ ಸೈನಿಕರೆಲ್ಲರೂ ಬಂದಿಗಳಾಗಿಯೋ, ಮರಣಿಸಿಯೋ ಇರಬೇಕೆಂದು ಗ್ರಹಿಸಿದನು. ಇನ್ನು ತಾನು ಸಾಧ್ಯವಾದಷ್ಟು ಬೇಗದಲ್ಲಿ ಕ್ರೂರನಾದ ವ್ಯಾಘ್ರದತ್ತನನ್ನು ಕೊಂದು ಅಲ್ಲಿಂದ ಪರಾರಿಯಾಗಬೇಕು. ಇಲ್ಲವೇ ಅವನ ಕೈಯಲ್ಲಿ ಸಾಯಬೇಕು.

ಹೀಗೆ ಆಲೋಚಿಸಿದ ಸಮರಸೇನನು ಉದ್ರಿಕ್ತನಾಗಿ ಹುಮ್ಮಸ್ಸಿನಿಂದ ವ್ಯಾಘ್ರದತ್ತನೊಂದಿಗೆ ಕಾದಾಡಲು ಪ್ರಾರಂಭಿಸಿದನು. ವ್ಯಾಘ್ರದತ್ತನ ಭಟರು ತನ್ನನ್ನು ಸುತ್ತುವರಿಯದಂತಿರಲು ಒಂದು ಗೋಡೆಗೆ ಆತುಕೊಂಡು ಸಮರಸೇನನು ಹೋರಾಡುತ್ತಿದ್ದನು. ಆದರೆ ಪಾಪ, ಆತನಿಗೆ ತಾನು ಒರಗಿಕೊಂಡಿದ್ದ ಗೋಡೆ








ಆಗಲೋ ಈಗಲೋ ಹಿಂದಕ್ಕೆ ಕುಸಿದು ಬೀಳುವ ಸ್ಥಿತಿಯಲ್ಲಿರುವುದೆಂದು ತಿಳಿಯದು. ಆದರೆ ಈ ವಿಷಯ ಮುಂದೆ ನಿಂತು ಹೋರಾಡುತ್ತಿದ್ದ ವ್ಯಾಘ್ರದತ್ತನು ಅರಿತಿದ್ದನು.

ಹಠಾತ್ತನೆ ವ್ಯಾಘ್ರದತ್ತನ ಭಟರ ಕರ್ಕಶ ಧ್ವನಿ ಮುಗಿಲುಮುಟ್ಟಿತು. ಅವರು ಸಮರಸೇನನ ಸೈನಿಕರನ್ನು ಬಂಧಿಸಿ ತಮ್ಮ ನಾಯಕನಿಗೆ ಸಹಾಯನೀಡಲು ಮುಂದೆ ಬಂದರು. ಅಷ್ಟರೊಳಗೆ ಮುಂಬರುವ ಪ್ರಮಾದವನ್ನು ತಿಳಿದ ಸಮರಸೇನನು ವ್ಯಾಘ್ರದತ್ತನ ಮೇಲೆ ಹಾರಿ, ಗೋಡೆಯ ಮೇಲಕ್ಕೆ ನೆಗೆದನು. ಇದೆಲ್ಲಾ ಮಿಂಚಿನ ವೇಗದಲ್ಲಿ ನಡೆಯಿತು.

ಸಮರಸೇನನು ಆ ರೀತಿ ಗೋಡೆಯಮೇಲಕ್ಕೆ ಹಾರಲು ಮೊದಲೇ ಶಿಥಿಲವಾಗಿ ಕುಸಿದುಬೀಳಲಿದ್ದ ಗೋಡೆ ಪೆಳಪೆಳನೆ ಭಯಂಕರ ಶಬ್ದ ಮಾಡುತ್ತಾ ಹಿಂದಕ್ಕೆ ಕುಸಿಯಿತು. ಅದರೊಂದಿಗೆ ಸಮರಸೇನನೂ ಬಿದ್ದು ಆ ಕಲ್ಲುಗಳ ನಡುವೆ ಸಿಕ್ಕಿಕೊಂಡನು.

ವ್ಯಾಘ್ರದತ್ತನಿಗೆ ಈಗ ಒಳ್ಳೆಯ ಅವಕಾಶ ಸಿಕ್ಕಿತು. ಅವನು ವಿಜಯಗರ್ವದಿಂದ ಕೇಕೆ ಹಾಕುತ್ತಾ ಸಮರಸೇನನಮೇಲೆ ಬಿದ್ದನು. ಸಮರಸೇನನು ಅಲುಗಾಡಲಾರದಂತಾದನು. ಅಷ್ಟರಲ್ಲಿ ವ್ಯಾಘ್ರದತ್ತನ ಭಟರೂಸಹ ಬಂದು ಸಮರಸೇನನ ಕಾಲು, ಕೈಗಳನ್ನು ಕೊಂಚವೂ ಕದಲದಂತೆ ಗಟ್ಟಿಯಾಗಿ ಹಿಡಿದುಕೊಂಡರು.

ವ್ಯಾಘ್ರದತ್ತನು ಮೇಲೆದ್ದು ತನ್ನ ಶತ್ರುವಿನ ಕೈಕಾಲುಗಳನ್ನು ಬಂಧಿಸುವಂತೆ ತನ್ನ ಸೈನಿಕರಿಗೆ ಆಜ್ಞಾಪಿಸಿದನು. ಸಮರಸೇನನ ಖಡ್ಗವನ್ನು ತನ್ನ ಸ್ವಾಧೀನಪಡಿಸಿಕೊಂಡನು.

ತನ್ನ ವೈರಿ ಕೈಗೆ ಸಿಕ್ಕಿದನೆಂಬ ಸಂತೋಷದಿಂದ ವ್ಯಾಘ್ರದತ್ತನು ಉಬ್ಬಿಹೋದನು. ಆತನು ಕ್ರೂರವಾದ ನಗೆ ಬೀರುತ್ತಾ,

"ಹೇಗೋ ಒಂದು ವಿಧವಾಗಿ ನನ್ನ ಕೈಗೆ ಸಿಕ್ಕಿಬಿದ್ದೆ. ಹಿಂದೆ ನನ್ನನ್ನು ಕಂಡಾಗಲೇ ರಾಜಿ ಮಾಡಿಕೊಂಡಿದ್ದರೆ ಬಹುಶಃ ನಿನಗೆ ಈ ದುರ್ಗತಿ ಬರುತ್ತಿರಲಿಲ್ಲ. ಶಾಕ್ತೇಯನ ಅಪೂರ್ವ ಶಕ್ತಿಯುಳ್ಳ ತ್ರಿಶೂಲವಿರುವ ಸ್ಥಳ ನನಗೆ ತಿಳಿಯಿತು. ನಿನಗೆ ದುರ್ಮರಣ ತಪ್ಪುವುದಿಲ್ಲ. ನಿನ್ನ ವಿಧಿಗೆ ಯಾರೇನು ಮಾಡುವರು?" ಎಂದ.

ವ್ಯಾಘ್ರದತ್ತನ ಮಾತುಗಳಿಗೆ ಸಮರಸೇನನು ಚಡಪಡಿಸಲಿಲ್ಲ. ತನಗೆ ದುರ್ಮರಣವೇ ಖಂಡಿತ









ವಾದರೆ ಅದಕ್ಕೆ ಆತನು ಸಿದ್ಧವಾಗಿದ್ದನು. ಆದರೆ ಆತನಿಗಿದ್ದ ಚಿಂತೆ ಎಂದರೆ ಒಂದೇ ಒಂದು. ತನ್ನ ನಾಯಕತ್ವದಲ್ಲಿ ತುಂಬು ನಂಬುಗೆಯನ್ನು ಇಟ್ಟು ನಾನಾ ಯಾತನೆಗಳಿಗೆ ಗುರಿಯಾದ ಸೈನಿಕರು ಅನ್ಯಾಯವಾಗಿ ಮರಣಹೊಂದುವರಲ್ಲಾ ಎಂದು ದುಃಖಿತನಾಗಿದ್ದನು. ಸೇನಾನಿಯಾದ ತಾನು ತನ್ನ ಸೈನಿಕರಿಗೆ ಸರಿಯಾದ ಮಾರ್ಗ ತೋರಿ ಸದೆ ಹೋದೆನೆಂದು ಅನುತಾಪ ಪಟ್ಟನು. ಆತನು ಈರೀತಿ ಚಿಂತಿಸುತ್ತಿರಲು ವ್ಯಾಘ್ರದತ್ತನಾಡಿದ ಮಾತುಗಳು ಕಿವಿಗೆ ಬೀಳಲಿಲ್ಲ.

ಆದರೆ ಸಮರಸೇನನ ಮೌನ ವ್ಯಾಘ್ರದತ್ತನನ್ನು ಗಾಬರಿಗೊಳಿಸಿತು. ಆತನ ಗಾಂಭೀರ್ಯ ವ್ಯಾಘ್ರದತ್ತನನ್ನು ಗೊಂದಲಿಕ್ಕೀಡುಮಾಡಿತು. ಯಾರದೋ ಸಹಾಯವನ್ನು ನಿರೀಕ್ಷಿಸಿ ಸಮರಸೇನನು ಆ ರೀತಿ ನಿರ್ಭಯನಾಗಿರುವನೆಂದು ಆತನು ಸಂಶಯಪಟ್ಟನು.

"ನಿನಗೆ ಈ ಸಂಕಟ ಸಮಯದಲ್ಲಿ ಸಹಾಯ ಮಾಡುವವರು ಯಾರೂ ಇಲ್ಲ. ಆ ವಿಷಯ ಚೆನ್ನಾಗಿ ತಿಳಿದುಕೋ" ಎಂದ ವ್ಯಾಘ್ರದತ್ತ. ಆ ರೀತಿ ಹೇಳಿದರೆ ತನಗೆ ಸಹಾಯಕ್ಕೆ ಬರುವವರ ಹೆಸರನ್ನಾದರೂ ಹೇಳಿಯಾನೆಂಬ ಆಶೆಯಿಟ್ಟುಕೊಂಡಿದ್ದ ವ್ಯಾಘ್ರದತ್ತ.

ವ್ಯಾಘ್ರದತ್ತನಲ್ಲಿ ಭಯಸಂದೇಹಗಳು ಬೇರೂರಿರುವುದನ್ನು ಚುರುಕುಬುದ್ಧಿಯ ಸಮರಸೇನನು ಗ್ರಹಿಸಿದನು. ಇದೇ ಸಮಯವೆಂದು ಅವನನ್ನು ಬೆದರಿಸಿದರೆ ತನಗೆ ಸಹಾಯವಾದೀತೆಂದು ಆತನು ಊಹಿಸಿದನು.

"ಶಾಕ್ತೇಯನ ತ್ರಿಶೂಲವಿರುವ ಸ್ಥಳ ಅರಿತಿರುವುದು ನೀನೊಬ್ಬನೇ ಅಲ್ಲ. ಈ ವಿಷಯ ನೀನು ಜ್ಞಾಪಕದಲ್ಲಿಟ್ಟುಕೊಂಡರೆ ಉತ್ತಮ. ಸ್ಥಳ ತಿಳಿದಮಾತ್ರಕ್ಕೆ ಪ್ರಯೋಜನ ವಿರಲಾರದು" ಎಂದು ಕೆಣಕಿದ ಸಮರಸೇನ.

ಈ ಉತ್ತರ ಕೇಳಿ ವ್ಯಾಘ್ರದತ್ತನು ಸ್ತಂಭಿತನಾದ. ಶಾಕ್ತೇಯನ ತ್ರಿಶೂಲ ಶಿಥಿಲನಗರದಲ್ಲಿ ಆನೆಗಳ ವನದಲ್ಲಿ ಇರುವುದೆಂದು ಶಿವದತ್ತನೊಬ್ಬನಿಗೆ ತಿಳಿದಿದೆ. ಹಾಗೂ ಆ ಗುಟ್ಟಿನ ವಿಷಯವನ್ನು ತಾನು ತನ್ನ ಭಟರಿಗೆ ಹೇಳುತ್ತಿದ್ದಾಗ ಈ ಸಮರಸೇನನೂ ಎಲ್ಲಿಂದಲೋ ಕೇಳಿಕೊಂಡಿರಬೇಕು.

"ತ್ರಿಶೂಲ ವಿರುವ ಸ್ಥಳವನ್ನು ಮರೆಯಲ್ಲಿ ನಿಂತು ನೀನು ಕೇಳಿರುವೆಯೆಂಬ ಸಂಗತಿ ನಾನು



ಅರಿತಿರುವೆನು. ಶಿವದತ್ತನಿಗೂ ಅದರ ವಿಷಯ ಮತ್ತು ಸ್ಥಳ ತಿಳಿದಿದೆ. ಆದರೆ ನೀನಾಗಲೀ, ಆ ಶಿವದತ್ತನಾಗಲೀ ನನ್ನನ್ನು ಅಡ್ಡಿಪಡಿಸುವ ಸ್ಥಿತಿಯಲ್ಲಿ ಇಲ್ಲ. ಹಾಗಿರಲು ಆ ದಿವ್ಯಶಕ್ತಿಯುಳ್ಳ ತ್ರಿಶೂಲ ನನ್ನ ಕೈಗೆ ಸಿಕ್ಕದಂತೆ ತಪ್ಪಿಸಲು ಇನ್ನು ಬೇರೆ ಯಾರಿಂದ ಸಾಧ್ಯ?" ಎಂದು ಪ್ರಶ್ನೆ ಮಾಡಿದ.

ಸಮರಸೇನನು ಆ ಪ್ರಶ್ನೆಗೆ ತಕ್ಷಣ ಉತ್ತರ ಕೊಡದೆ ನಸುನಕ್ಕನು. ವ್ಯಾಘ್ರದತ್ತನನ್ನು ಗೊಂದಲದಲ್ಲಿ ಕೆಡವಿ, ಅನುಮಾನವನ್ನು ಹೆಚ್ಚಿಸಬೇಕೆಂದು ಸಮರಸೇನನ ಬಯಕೆ. ವ್ಯಾಘ್ರದತ್ತನ ಕ್ಷಣಕ್ಷಣಕ್ಕೂ ಬಿಳುಪೇರುತ್ತಿದ್ದ ಮುಖವೇ ಆ ಪ್ರಯತ್ನ ಫಲಿಸುತ್ತಿರುವುದೆಂಬುದಕ್ಕೆ ಸಾಕ್ಷಿಯಾಗಿತ್ತು.

"ತ್ರಿಶೂಲ ನಿನ್ನ ಕೈಗೆ ಸಿಕ್ಕದಂತೆ ಅಡ್ಡಪಡಿಸಲು ಇಬ್ಬರಿದ್ದಾರೆ. ಅವರಲ್ಲಿ ಒಬ್ಬನನ್ನು ಮಾತ್ರ ನೀನೀಗ ಬಂಧಿಸಿರುವೆ. ಆದರೆ ತ್ರಿಶೂಲ ನಿನ್ನ ಕಣ್ಣಿಗೆ ಬೀಳುವ ಮುಂಚೆಯೇ ನಿನ್ನನ್ನು ಕೊಲ್ಲುವ ವ್ಯಕ್ತಿ ಮತ್ತೊಬ್ಬನಿರುವನು. ಆತನು ನನ್ನ ಪರಮ ಮಿತ್ರ. ಆತನ ಆಜ್ಞಾನುವರ್ತಿಯಾಗಿ ನಾನು ಈ ವ್ಯಾಘ್ರಮಂಡಲಕ್ಕೆ ಬಂದಿರುವೆನು. ತಿಳಿಯಿತೋ?" ಎಂದ ಸಮರಸೇನ ಗಂಭೀರಸ್ವರದಲ್ಲಿ.

ವ್ಯಾಘ್ರದತ್ತನು ಆ ಮಾತುಗಳನ್ನು ಕೇಳಿ ಕಳವಳಗೊಂಡನು. ತನ್ನ ವಿಜಯವು ತಾನೆನಿಸಿದಷ್ಟು ಸುಲಭವಲ್ಲವೆಂದು ಅವನಿಗೆ ತೋರಿತು. "ನನ್ನನ್ನು ಅಡ್ಡಿಪಡಿಸುವವನು ಯಾರು?"




ಮತ್ತೊಮ್ಮೆ ಕೇಳಿದ ವ್ಯಾಘ್ರದತ್ತ. ಆದರೆ ಆತನ ಸ್ವರದಲ್ಲಿ ಸ್ಥೈರ್ಯ ವಿರಲಿಲ್ಲ. "ಚತುರ್ನೇತ್ರ" ಎಂದು ಗಂಭೀರವಾಗಿ ಹೇಳಿದ ಸಮರಸೇನ. "ಚತುರ್ನೇತ್ರ" ಎಂಬ ಸೊಲ್ಲು ಅಲ್ಲೆಲ್ಲಾ ಪ್ರತಿಧ್ವನಿಸಿತು.

ಚತುರ್ನೇತ್ರನ ಹೆಸರನ್ನು ಕೇಳಿದಾಕ್ಷಣ ವ್ಯಾಘ್ರದತ್ತನೇ ಅಲ್ಲದೆ ಆತನ ಭಟರೂ ಸಹ ತಲ್ಲಣಿಸಿದರು. ಭಟರು ಭಯಕಂಪಿತರಾಗಿ ತಮ್ಮ ನಾಯಕನ ಕಡೆ ದೈನ್ಯದಿಂದ ನೋಡತೊಡಗಿದರು. ಅದನ್ನು ಗಮನಿಸಿದ ವ್ಯಾಘ್ರದತ್ತನು ಹುಸಿ ಉತ್ಸಾಹ, ಧೈರ್ಯಗಳನ್ನು ನಟಿಸುತ್ತಾ,

"ಆತನನ್ನು ನೀನು ಬಲ್ಲೆ ಎಂದಾಯಿತು" ಎಂದ ಹುಸಿನಗುವಿನಿಂದ. "ಆತನ ಆಜ್ಞೆಯನ್ನು ಪಾಲಿಸಲೇ ನಾನಿಲ್ಲಿಗೆ ಬಂದೆನೆಂಬ ವಿಷಯ

ಮರೆಯಬೇಡ, ಚೆನ್ನಾಗಿ ನೆನಪಿಟ್ಟುಕೊ" ಎಂದ ಸಮರಸೇನ. ವ್ಯಾಘ್ರದತ್ತನು ಗಡಗಡ ನಡುಗಿದನು. ಚತುರ್ನೇತ್ರನನ್ನು ಕುರಿತೂ, ಆತನ ಶಕ್ತಿ ಸಾಮರ್ಥ್ಯಗಳನ್ನು ಕುರಿತೂ ಅವನು ಅನೇಕ ಮುಖಗಳಿಂದ ಅನೇಕಸಾರಿ ಕೇಳಿದ್ದ.

ಮುಂದೇನು ಮಾಡಬೇಕೆಂದು ವ್ಯಾಘ್ರದತ್ತನು ಯೋಚಿಸುತ್ತಿರವಲ್ಲಿ ಸೈನಿಕರ ಕೋಲಾಹಲ ಕೇಳಿಬಂದಿತು. ಅಷ್ಟರಲ್ಲಿ ಭಟನೊಬ್ಬನು ಓಡೋಡಿ ಬಂದು "ಸ್ವಾಮಿ, ಶಿವದತ್ತನು ತನ್ನ ಅನುಚರರೊಂದಿಗೆ ಶಿಥಿಲನಗರವನ್ನು ಪ್ರವೇಶಿಸಿದನು" ಎಂದು ಹೇಳಿದ.

ವ್ಯಾಘ್ರದತ್ತನ ತಲೆಯಮೇಲೆ ಸಿಡಿಲೆರಗಿದಂತಾಯಿತು. ಆತನಿಗೆ ಈಗ ಉಳಿದಿರುವುದು ಎರಡೇ ಎರಡು ಮಾರ್ಗಗಳು—ಒಂದು ತನ್ನ ಹತ್ತಿರವಿದ್ದ ಕೇವಲ ಕೆಲವೇ ಜನ ಭಟರೊಂದಿಗೆ ಶಿವದತ್ತನನ್ನು ಎದುರುಗೊಳ್ಳಬೇಕು. ಇಲ್ಲದಿದ್ದರೆ ಅಲ್ಲಿಂದ ಪರಾರಿಯಾಗಬೇಕು. ಹಾಗಾದರೆ ಸಮರಸೇನನನ್ನು ಏನು ಮಾಡಬೇಕು? ತಕ್ಷಣವೇ ಆತನನ್ನು ಕೊಲ್ಲುವುದು ಉಚಿತವೆಂದು ತೋಚಿದರೂ ಅದು ಪ್ರಮಾದಕರವೆಂದು ಎಣಿಸಿದನು. ಒಂದುವೇಳೆ ಮಿತ್ರನ ಅಕಾಲ ಮರಣಕ್ಕೆ ಕುಪಿತನಾಗಿ ಅಜೇಯನಾದ ಚತುರ್ನೇತ್ರನು ತನ್ನ ವ್ಯಾಘ್ರಮಂಡಲವನ್ನೇ ಧೂಳೀ ದೂಸರ ಮಾಡಬಹುದು!

"ಎಲೈ, ಸಮರಸೇನನೇ, ಈಗಲಾದರೂ ನಾವಿಬ್ಬರೂ ರಾಜಿಮಾಡಿಕೊಳ್ಳುವುದು ನನಗೂ ನಿನಗೂ ಕ್ಷೇಮಕರವೆಂದು ನಾನು ಭಾವಿಸುತ್ತೇನೆ. ಆ ಮಾತುಕತೆಗಳನ್ನು ವಿರಾಮವಾಗಿ ಮಾತನಾಡೋಣ. ಈಗ ನಾವಿಲ್ಲಿಂದ ಸುರಕ್ಷಿತವಾದ ಸ್ಥಳಕ್ಕೆ ಹೋಗುವುದು ಆವಶ್ಯಕ" ಎಂದ. ಮತ್ತು ವ್ಯಾಘ್ರದತ್ತನ ಸನ್ನೆಯಂತೆ, ಅವನ ಕಡೆಯವರು ಸಮರಸೇನನನ್ನು ಮುತ್ತಿದರು.

ತರುವಾಯ ನಿರಾಯುಧನಾದ ಸಮರಸೇನನನ್ನು ಸಂಗಡ ಕರೆದುಕೊಂಡು ವ್ಯಾಘ್ರದತ್ತನೂ ಆತನ ಅಂಗರಕ್ಷರಿಬ್ಬರೂ ಅಲ್ಲಿಂದ ಓಡಿದರು. ಓಡಿಹೋಗುತ್ತಿದ್ದವರಿಗೆ ದೂರದಲ್ಲಿ ಶಿವದತ್ತನ ಅನುಚರರೊಂದಿಗೆ ಹೋರಾಡುತ್ತಿದ್ದ ವ್ಯಾಘ್ರದತ್ತನ ಭಟರ ಅರಚಾಟ ಆಕ್ರಂದನಗಳು ಬಹಳ ಭಯಂಕರವಾಗಿ ಕೇಳಿಸುತ್ತಿದ್ದವು.

[ಇನ್ನೂ ಇದೆ]





# ಧೂರ್ತ ಬ್ರಾಹ್ಮಣ

ಬಹಳಕಾಲದ ಹಿಂದೆ ಪಾಟಲೀ ಪುರದಲ್ಲಿ ಸಂಪನ್ನನಾದ ಬ್ರಾಹ್ಮಣನಿಗೆ ಕೇಸರಿ ಎಂಬ ಒಬ್ಬ ಮಗನಿದ್ದನು. ಕೇಸರಿ ಅಸಾಧಾರಣ ರೂಪವಂತನು. ಯುಕ್ತವಯಸ್ಸು ಬಂದ ಕೂಡಲೇ ವಿವಾಹ ವಾಗಬೇಕೆಂದು ಅವನಿಗೆ ಅಪೇಕ್ಷೆಯುಂಟಾಯಿತು.

ಆದರೆ ತನಗೆ ಅನುರೂಪಳಾದ ಯುವತಿ ಸಮೀಪದಲ್ಲಿ ಎಲ್ಲೂ ಕಂಡೂ ಬರಲಿಲ್ಲವಾದ ಕಾರಣ ಕೇಸರಿ ತೀರ್ಥಯಾತ್ರೆ ಮಾಡಿಕೊಂಡು ಬರುವೆನೆಂದು ತಂದೆತಾಯಿಗಳಿಗೆ ತಿಳಿಸಿ ಕನ್ಯೆಯನ್ನು ಹುಡುಕಲು ಹೊರಟನು.

ಕೇಸರಿ ಅನೇಕ ದಿವಸ ಪ್ರಯಾಣ ಮಾಡಿ ನರ್ಮದಾ ನದಿತೀರವನ್ನು ಸೇರಿದ. ಆ ಸಮಯಕ್ಕೆ ಸರಿಯಾಗಿ ಯಾವುದೋ ಒಂದು ಮದುವೆಯ ಗುಂಪು ಅಲ್ಲಿಗೆ ಬಂತು.

ಆ ಗುಂಪಿನಲ್ಲಿದ್ದ ಒಬ್ಬ ವೃದ್ಧಬ್ರಾಹ್ಮಣನು ಕೇಸರಿಯ ಅಂದಚೆಂದಗಳನ್ನು ನೋಡಿ ಆತನ ಬಳಿಸಾರಿ "ಅಣ್ಣಾ, ನಾನು ಬಹಳಮುದುಕನಾದೆ. ದಯಮಾಡಿ ನನಗೊಂದು ಸಹಾಯ ಮಾಡಬಾರದೆ?" ಎಂದು ದೀನನಾಗಿ ಕೇಳಿದ. "ಹೇಳಿ, ನನ್ನಿಂದ ಸಾಧ್ಯವಾಗುವುದಾದರೆಮಾಡಿ ಕೊಡುತ್ತೇನೆ" ಎಂದ ಕೇಸರಿ.

"ನನಗೆ ಈ ಒಂದು ಸಹಾಯ ಮಾಡುವುದರಿಂದ ನಿನಗೇನೂ ನಷ್ಟವಾಗುವುದಿಲ್ಲ; ಬದಲಾಗಿ ನನ್ನ ವಂಶವನ್ನು ಉಳಿಸಿಕೊಡುವವನಾಗುವೆ" ಎಂದ ಆ ಮುದಿಬ್ರಾಹ್ಮಣ.

"ನಾನೇನು ಮಾಡಬೇಕು?" ಎಂದ ಕೇಸರಿ.

"ನರ್ಮದಾ ನದಿಗೆ ಸನಿಯದಲ್ಲೇ ರತ್ನದತ್ತನೆಂಬ ವಿಪ್ರನಿರುವನು. ಆತನಿಗೆ ರೂಪವತಿ ಎಂಬ ಮಗಳಿರುವಳು. ಲಾವಣ್ಯವತಿ. ಆ ಹುಡುಗಿಯನ್ನು ನನ್ನ ಮಗನಿಗೆ ತಂದುಕೊಳ್ಳಲು ಹೊರಟಿರುವೆನು. ನನ್ನ ಮಗನನ್ನು ಅವರಿನ್ನೂ ನೋಡಿಲ್ಲ. ನೀನೆಷ್ಟು ಸುರೂಪಿಯೋ ಅವನಷ್ಟು ಕುರೂಪಿ. ಅವನನ್ನು ನೋಡಿದರೆ ರತ್ನದತ್ತನು ಮಗಳನ್ನು ಕೊಡಲು ಬಹುಶಃ ಒಪ್ಪಲಾರ. ಆದರಿಂದ ನೀನು ನಮ್ಮೊಂದಿಗೆ ಬಂದರೆ ನನ್ನ ಮಗನೆಂದು ಅವರಿಗೆ ನಿನ್ನನ್ನು ಪರಿಚಯ ಮಾಡಿಸುವೆನು. ನಿನ್ನನ್ನು ಮದವಣಿಗನಾಗಿ

ಮಾಲಿನೀ ಮಾಧವಯ್ಯ



ರಾಕ್ಷಸನೊಬ್ಬನು ಹಿಡಿದುಕೊಂಡ. ತಾನೊಬ್ಬ ಬ್ರಾಹ್ಮಣನಿಗೆ ಸಹಾಯ ಮಾಡಲು ಮಾತು ಕೊಟ್ಟಿರುವುದಾಗಿಯೂ, ಆ ಕಾರ್ಯ ಮುಗಿಸಿ, ಮಾರನೆಯ ರಾತ್ರಿ ಬರುವೆನೆಂತಲೂ, ಆಗ ರಾಕ್ಷಸನು ತನ್ನನ್ನು ತಿನ್ನಬಹುದೆಂತಲೂ ಕೇಸರಿ ತುಂಬಾ ಕನಿಕರ ಬರುವಂತೆ ಹೇಳಿಕೊಂಡ.

"ಕೊಟ್ಟ ಮಾತು ತಪ್ಪುವುದಿಲ್ಲ ತಾನೇ?" ಎಂದ ರಾಕ್ಷಸ ಅನುಮಾನದಿಂದ.

"ಕೊಟ್ಟಮಾತಿಗೆ ತಪ್ಪಬಾರದೆಂಬ ಧ್ಯೇಯದಿಂದ ಆ ಬ್ರಾಹ್ಮಣನು ದುರುಳನಾದರೂ ಸಹ ಸಹಾಯ ಮಾಡುತ್ತಿರುವೆನು" ಎಂದ ಕೇಸರಿ.

"ಸರಿ, ಹೋಗಿಬಾ. ನಿನ್ನ ಸತ್ಯಸಂಧತೆ ಪರೀಕ್ಷಿಸಿಯೇ ಬಿಡೋಣ" ಎಂದ ರಾಕ್ಷಸ.

ಮಾಡುತ್ತೇವೆ. ಹೆಣ್ಣಿಗೆ ನೀನೇ ತಾಳಿಕಟ್ಟು. ಮದುವೆ ಮುಗಿದನಂತರ ನಿನ್ನ ದಾರಿ ನೀನು ಹೋಗು. ನನ್ನಪಾಡಿಗೆ ನಾನು ಸೊಸೆಯನ್ನು ಕರೆದುಕೊಂಡು ಹೋಗುವೆನು. ಈ ಕೆಲಸ ಮಾಡಿದರೆ ನಾನು ನಿನಗೆ ಚಿರಋಣಿಯಾಗಿರುವೆನು" ಎಂದು ಹೇಳಿದ ಆ ಬ್ರಾಹ್ಮಣ.

ಆ ಮುದುಕನ ಧೂರ್ತತೆಗೆ ಕೇಸರಿ ದಿಗ್ಭ್ರಮೆಗೊಂಡನು. ಮಾತುಕೊಟ್ಟ ತಪ್ಪಿಗಾಗಿ ಮುದುಕನು ಹೇಳಿದಂತೆ ಕೇಳಲೇ ಬೇಕಾಯಿತು. ಕೇಸರಿಯೂ ದಿಬ್ಬಣದವರೊಂದಿಗೆ ಸೇರಿ ನದಿಯನ್ನು ದಾಟಿ ಆ ಸಾಯಂಕಾಲವೇ ಮದುವಣಗಿತ್ತಿಯ ಮನೆ ಸೇರಿಕೊಂಡ.

ಆ ಸಾಯಂಕಾಲ ಕೇಸರಿ ನಿತ್ಯಕರ್ಮಗಳಿಗಾಗಿ ನದಿಯಬಳಿಗೆ ಹೋದ. ಅಲ್ಲಿ ಕೇಸರಿಯನ್ನು

ಕೇಸರಿ ಮದುಮಗನಾದ. ವಿವಾಹ ವಿಜೃಂಭಣೆಯಿಂದ ನೆರವೇರಿತು. ಆ ರಾತ್ರಿ ವಧೂವರರನ್ನು ಕೊಟಡಿಯೊಳಗೆ ಕೂಡಿಹಾಕಿದರು. ಕೇಸರಿ ರೂಪವತಿಯನ್ನು ಕಣ್ಣೆತ್ತಿ ನೋಡಲಿಲ್ಲ. ಆಕೆಯೊಂದಿಗೆ ಮಾತನಾಡಲಿಲ್ಲ. ಅಷ್ಟು ಸುಂದರನು ತನ್ನ ಪತಿಯಾದನೆಂದು ಆನಂದಚಿತ್ತಳಾಗಿದ್ದಳು ರೂಪವತಿ. ಆದರೆ ಆತನೇಕೆ ತನ್ನೊಂದಿಗೆ ಮಾತನಾಡನೋ ಆಕೆಗೆ ಅರ್ಥವಾಗಲಿಲ್ಲ. ಕೊನೆಗೆ ನಿದ್ದೆ ಮಾಡುವವಳಂತೆ ಕಣ್ಣುಮುಚ್ಚಿಕೊಂಡು ಮಲಗಿದಳು.

ರೂಪವತಿ ಗಾಢನಿದ್ದೆಯಲ್ಲಿರುವಳೆಂದು ಭಾವಿಸಿ, ಕೇಸರಿ ಮೆಲ್ಲನೆ ಕೊಠಡಿಯಿಂದ ಹೊರಬಂದು ನದೀತೀರದಲ್ಲಿದ್ದ ರಾಕ್ಷಸನಲ್ಲಿಗೆ ಹೊರಟನು. ಕಳ್ಳ ನಿದ್ದೆಯಲ್ಲಿದ್ದ ರೂಪವತಿಯೂ

ಒಡನೇ ಎದ್ದು ಮೇಲು ಮುಸುಕೆಳೆದುಕೊಂಡು ಕೇಸರಿಯನ್ನು ಹಿಂಬಾಲಿಸಿದಳು.

ಕೇಸರಿ ನದಿತೀರಕ್ಕೆ ಬರುವ ವೇಳೆಗೆ ಅಲ್ಲಿ ಆ ರಾಕ್ಷಸನು ಹಾಜರಿದ್ದ.

"ಯುವಕನೇ, ಭಲೆ! ಆಡಿದ ಮಾತನ್ನುಳಿಸಿಕೊಂಡೆ. ಇಷ್ಟು ಸತ್ಯಸಂಧನಾದ ನಿನ್ನನ್ನು ಭಕ್ಷಿಸಿ ತುಂಬಾ ಪಾಪಿಯಾದ ನಾನು ಪವಿತ್ರನಾಗುವೆನು ಬಾ" ಎಂದ ರಾಕ್ಷಸ.

ಇದೆಲ್ಲವನ್ನೂ ಮರೆಯಲ್ಲಿ ನಿಂತು ಕೇಳುತ್ತಿದ್ದ ರೂಪವತಿ ಹೊರಗೆ ಬಂದು "ಅಯ್ಯೋ, ಅವರು ನನ್ನ ಪತಿ. ಬಿಟ್ಟುಬಿಡು" ಎಂದಳು.

"ನನಗೆ ಹಸಿವಾಗಿದೆ. ನಾನು ಈತನನ್ನು ತಿನ್ನುವೆನು. ನನ್ನನ್ನೇನುಮಾಡೂಂತ ಹೇಳುವೆ?" ಎಂದು ರಾಕ್ಷಸ ಅವಳನ್ನು ಕೇಳಿದ.

"ಹಸಿವಾಗಿದ್ದರೆ ನನ್ನನ್ನು ತಿಂದು ಆತನನ್ನು ಬಿಡಿ. ಅವರನ್ನು ತಿಂದು ನನ್ನನ್ನು ದಿಕ್ಕಿಲ್ಲದವಳಂತೆ ಮಾಡಿದರೆ ನನ್ನ ಗತಿ ಏನಾಗಬೇಕು?" ಎಂದಳು ರೂಪವತಿ.

"ತಿರುಪೆ ಬೇಡು" ಎಂದ ರಾಕ್ಷಸ.

"ಅನಾಥಳಾದರೆ ನನಗೆ ಯಾರು ಬಿಕ್ಷೆ ಕೊಡುವರು?" ಎಂದಳು ರೂಪವತಿ.

"ನೀನು ಕೇಳಿದರೆ ಭಿಕ್ಷೆ ನೀಡದವನು ತಲೆಯೊಡೆದು ಸಾಯುವನು. ಸರಿಯೋ? ಇನ್ನು ಹೊರಡು" ಎಂದ ರಾಕ್ಷಸ.

"ಹಾಗಿದ್ದ ಪಕ್ಷಕ್ಕೆ ನಿನ್ನನ್ನೇ ಕೇಳುವೆನು. ನನಗೆ ಪತಿಭಿಕ್ಷೆಯಿಡು" ಎಂದಳು ರೂಪವತಿ.

ಆಕೆಯ ಬುದ್ಧಿವಂತಿಕೆಯನ್ನು ಕಂಡು ರಾಕ್ಷಸನಿಗೆ ತುಂಬಾ ಆನಂದವಾಯಿತು. "ಇಗೋ








ಭರಣಗಳನ್ನು ಕಿತ್ತು ಕೊಂಡು ತನ್ನ ಕಡೆಯವರನ್ನೆಲ್ಲಾ ಒಂದು ದೋಣಿಯಲ್ಲಿ ಹತ್ತಿಸಿದ. ಇನ್ನೊಂದು ದೋಣಿಯಲ್ಲಿ ಕೇಸರಿಯೊಬ್ಬನೇ ಹತ್ತುವಂತೆ ಏರ್ಪಾಡು ಮಾಡಿದ.

ಆ ದೋಣಿ ನಡೆಸುವ ಅಂಬಿಗನಿಗೆ ಅಪಾರ ಹಣ ಕೊಟ್ಟು ನದಿ ಮಧ್ಯೆ ದೋಣಿಯನ್ನು ಮುಳುಗಿಸುವಂತೆ ಹೇಳಿದ. ಎರಡು ದೋಣಿಗಳೂ ಹೊರಟುವು.

ಮೊದಲನೆಯ ದೋಣಿ ತೊಂದರೆಯಿಲ್ಲದೆ ಆಚೆದಡ ತಲುಪಿತು. ಕೇಸರಿ ಹತ್ತಿದ್ದ ದೋಣಿ ನಡು ನೀರಿನಲ್ಲಿ ಮುಳುಗಿತು. ಅಂಬಿಗನು ಅದನ್ನು ವಹಾಸುಳಿಗೆ ತಳ್ಳಿ ಈಜಿಕೊಂಡು ದಡವನ್ನು ಸೇರಿದನು. ಪ್ರವಾಹ ಬಲವಾಗಿತ್ತು. ಕೇಸರಿಯಿದ್ದ ದೋಣಿ ಬಹುದೂರ ಕೊಚ್ಚಿಕೊಂಡು ಹೋಯಿತು. ದೇವರ ಕೃಪೆಯಿಂದ ಕೇಸರಿ ಪ್ರಯಾಸದಿಂದ ತೀರವನ್ನು ತಲುಪಿದ.

ದೇಹದಲ್ಲೆಲ್ಲಾ ಅನೇಕ ಕಡೆ ಆತನಿಗೆ ಗಾಯಗಳಾದವು. ವೃದ್ಧ ಬ್ರಾಹ್ಮಣನು ತನಗೆ ಮಾಡಿದ ದ್ರೋಹಕ್ಕಿಂತಲೂ ರೂಪವತಿಯನ್ನು ಅಗಲಿರಬೇಕಾಯಿತಲ್ಲಾ ಎಂಬ ವ್ಯಸನವೇ ಆತನನ್ನು ಬಾಧಿಸ ತೊಡಗಿತು.

ಮದುವೆಯ ಗುಂಪಿನೊಂದಿಗೆ ನದಿಯನ್ನು ದಾಟಿ ಕಾಲು ನಡಿಗೆಯಿಂದ ಪ್ರಯಾಣ ಮಾಡುತ್ತಿದ್ದ ರೂಪವತಿ ತನ್ನ ಪತಿಯನ್ನು ಅತ್ತಿತ್ತ ಹುಡುಕಾಡಿದಳು. ಎಲ್ಲಿಯೂ ಕಾಣದೆ ಚಿಂತಾಕ್ರಾಂತಳಾಗಿ ವೃದ್ಧ ಬ್ರಾಹ್ಮಣನಲ್ಲಿಗೆ ಹೋಗಿ, "ಎಲ್ಲರೂ ಇರುವಾಗ ಅವರು ಮಾತ್ರ ಕಾಣಿಸು

ನಿನ್ನಪತಿ. ಆತನಿಗೆ ಯೋಗ್ಯಳಾದ ಸತಿ ನೀನು. ನೀವಿಬ್ಬರೂ ಬಹುಕಾಲ ಸುಖವಾಗಿ ಬಾಳಿ" ಎಂದು ಹರಸಿ ಕತ್ತಲೆಯಲ್ಲಿ ಮಾಯವಾಗಿ ಹೋದ ರಾಕ್ಷಸ.

ರೂಪವತಿಯ ಪತಿಭಕ್ತಿಯನ್ನು ಕಂಡು ಕೇಸರಿ ಹರ್ಷಗೊಂಡನು. ಆಗಲೂ ಆತನು ಆಕೆಗೆ ನಿಜ ಸಂಗತಿಯನ್ನು ತಿಳಿಸಲಿಲ್ಲ. ಬೆಳಗಾಗುವ ವೇಳೆಗೆ ಅವರು ಮನೆಗೆ ಹಿಂತಿರುಗಿದರು.

ಮಾರನೆಯ ದಿವಸ ಬೇಗ ಊಟ ಮುಗಿಸಿಕೊಂಡು ವರನ ಕಡೆಯವರು ವಧುವಿನೊಂದಿಗೆ ತಮ್ಮ ಸ್ಥಳಕ್ಕೆ ಹೊರಟರು.

ಕೃತಘ್ನನಾದ ಮುದುಕ ಬ್ರಾಹ್ಮಣನು ನದಿ ದಾಟಬೇಕೆಂಬ ನೆವ ಹೂಡಿದ. ಕೇಸರಿಯೊಂದಿಗೆ ಕೆಲಸ ಮುಗಿಯಿತೆಂದು ಹೇಳಿ ಆತನ ವಸ್ತ್ರಾ

ತ್ತಿಲ್ಲವೇಕೆ?" ಎಂದು ಕೇಳಿದಳು. "ನಿನ್ನ ಪತಿ ತಾನೆ! ಇಗೋ ಇಲ್ಲಿ ಸುಖವಾಗಿರುವನು" ಎಂದು ಮುದುಕ ಬ್ರಾಹ್ಮಣನು ತನ್ನ ಕುರೂಪಿ ಮಗನನ್ನು ತೋರಿಸಿದನು.

ರೂಪವತಿಗೆ ಅಸಹನೀಯವಾದ ದುಃಖವೂ ಕೋಪವೂ ಉಂಟಾಯಿತು. ಇದರಲ್ಲೇನೋ ಮೋಸವಿರಬೇಕೆಂದು ಗ್ರಹಿಸಿದಳು.

"ಏನು! ಈತನೇ ನನ್ನಪತಿ. ಇದೇನೋ ರಾಜರನ್ನೇ ವಿಚಾರಿಸಿ ತಿಳಿಯುತ್ತೇನೆ" ಎಂದು ಸವಾಲು ಹಾಕಿದಳು. ಮದುಮಗಳು ರಾಜನಿಗೆ ದೂರುಕೊಟ್ಟರೆ ತನ್ನ ತಲೆಗೆ ಮುಪ್ಪು ಒದಗುವುದೆಂದು ಮುದುಕನು ಹೆದರಿದನು. ಆಕೆಯನ್ನು ಹೇಗೆಹೇಗೋ ಸಮಾಧಾನಪಡಿಸಿ ತೌರು ಮನೆಗೆ ಕಳುಹಿಸಿಕೊಟ್ಟು, ತನ್ನ ದಾರಿ ಹಿಡಿದ.

ರೂಪವತಿ ತೌರುಮನೆಯಲ್ಲಿ ತನ್ನ ಪತಿಗಾಗಿ ದಿವಾರಾತ್ರಿ ಪರಿತಪಿಸುತ್ತಿದ್ದಳು. ಆತನು ಜೀವಂತನಾಗಿರುವನೋ ಇಲ್ಲವೋ ಎಂಬ ಭಯ ಆಕೆಯನ್ನು ಆವರಿಸಿತು. ವೃದ್ಧಬ್ರಾಹ್ಮಣನು ತನ್ನ ಪತಿಗೇನಾದರೂ ಪ್ರಾಣಾಪಾಯ ಮಾಡಿದನೇನೋ ಎಂದು ತುಂಬಾ ಭೀತಿಗೊಂಡಳು.

ಅಷ್ಟರಲ್ಲಿ ಜೀವಸಹಿತ ಪ್ರವಾಹದಿಂದ ಪಾರಾದ ಕೇಸರಿ ರೂಪವತಿಗಾದ ಅನ್ಯಾಯವನ್ನು ಆಕೆಯ ತಂದೆ ರತ್ನದತ್ತನಿಗೆ ತಿಳಿಸಿ, ಈ ಒಳಸಂಚಿಗೆ ಭಾಗಿಯಾದ ತಾನು ಪ್ರಾಯಶ್ಚಿತ್ತ ಮಾಡಿಕೊಳ್ಳಲು ಕಾಲು ನಡಿಗೆಯಿಂದ ರೂಪವತಿಯ ತಂದೆಯ ಮನೆಗೆ ಹೋದನು.

ಅಲ್ಲಿಗೆ ಹೋದಕೂಡಲೇ ಆತನಿಗೆ ಮೊದಲು ಕಾಣಿಸಿದಾಕೆ ರೂಪವತಿಯೇ. ಆಕೆಯನ್ನು ಕಂಡು ಕೇಸರಿ ಆಶ್ಚರ್ಯಗೊಂಡನು. ಕೇಸರಿಯನ್ನು ಕಂಡು ರೂಪವತಿಗಾದ ಆನಂದಕ್ಕೆ ಮಿತಿಯಿಲ್ಲದಾಯಿತು. ಕೇಸರಿಯನ್ನು ಅತ್ಯಂತ ಆದರಾಭಿಮಾನಗಳಿಂದ ನೋಡಿಕೊಂಡ ರತ್ನದತ್ತ.

ಕೊಂಚ ದಿನ ಮಾವನ ಮನೆಯಲ್ಲಿದ್ದು ಕೇಸರಿ ರೂಪವತಿಯೊಂದಿಗೆ ಪಾಟಲೀಪುರಕ್ಕೆ ಹಿಂತಿರುಗಿದನು. ಅಲ್ಲಿ ಏನೂ ತೊಂದರೆಯಿಲ್ಲದೆ ಅವರಿಬ್ಬರೂ ಅನೇಕ ವರ್ಷಗಳಕಾಲ ಸುಖವಾಗಿ ಜೀವನ ಮಾಡಿಕೊಂಡಿದ್ದರು.

ಧೂರ್ತನಾದ ಮುದುಕ ಬ್ರಾಹ್ಮಣ ಇನ್ನೇನು ತಾನೇ ಮಾಡಬಲ್ಲ? ಅವನ ಮಗ ಅವಿವಾಹಿತನಾಗಿಯೇ ಉಳಿಯ ಬೇಕಾಯಿತು.





# ಮಂತ್ರಿಯ ಯುಕ್ತಿ

ಅನೇಕ ವರ್ಷಗಳ ಕೆಳಗೆ ಅರೇಬಿಯಾ ದೇಶದಲ್ಲಿ ಒಬ್ಬ ಸುಲ್ತಾನನಿದ್ದನು. ಆತನು ರಾಜ್ಯ ಪರಿಪಾಲನೆಯಲ್ಲಿ ಅಶ್ರದ್ಧೆ ವಹಿಸಿ, ಸದಾ ಸ್ವಂತ ಭೋಗಲಾಲಸೆಗಳಲ್ಲಿ ತಲ್ಲೀನನಾಗಿದ್ದನು. ಅದರಿಂದಾಗಿ ರಾಜ್ಯವು ತುಂಬಾ ಅಧೋಗತಿಗಿಳಿಯಿತು. ಅಧಿಕಾರಿಗಳು ಸೋಮಾರಿಗಳಾದರು. ಪ್ರಜೆಗಳ ಜೀವನವು ಕಾಂತಿಹೀನವಾಯಿತು.

ಸುಲ್ತಾನನಬಳಿ ಅನೇಕ ಮಂತ್ರಿಗಳಿದ್ದರು. ಅವರಲ್ಲನೇಕರು ಸುಲ್ತಾನನಂತೆಯೇ ಆನಂದ ಪ್ರಮೋದಗಳಲ್ಲಿ ಮುಳುಗಿದ್ದರು. ಕೆಲವರು ಅನ್ಯಾಯವಾಗಿ ರಾಜ್ಯವು ಹಾಳಾಗುತ್ತಿರುವುದನ್ನು ಕಂಡು ವ್ಯಥೆಪಟ್ಟರೂ ಸುಲ್ತಾನನೊಂದಿಗೆ ಹೇಳಿದರೆ ಕುಪಿತನಾಗುವನೆಂದು ಅಂಜುತ್ತಿದ್ದರು.

ಆ ಮಂತ್ರಿಗಳಲ್ಲಿ ಒಬ್ಬನು ಸುಲ್ತಾನನಿಗೆ ಪಾಠ ಕಲಿಸಲು ಒಂದು ಉಪಾಯ ಹೂಡಿದನು. ಒಂದು ಸಾಯಂಕಾಲ ಆತನು ಸುಲ್ತಾನನೊಂದಿಗೆ ಉದ್ಯಾನದಲ್ಲಿ ತಿರುಗಾಡಿಕೊಂಡು ಬರಲು ಹೋದನು. ಕತ್ತಲಾದನಂತರ ಅವರಿಬ್ಬರೂ ಅರಮನೆಯಕಡೆ ಕಾಲು ಹಾಕಿದರು. ಆಗ ಅವರಿಗೆ ಗೂಬೆಗಳ ಅರಚಾಟ ಕೇಳಿಸಿತು. ಅದನ್ನು ಕೇಳಿದ ಕೂಡಲೇ ಮಂತ್ರಿ ಪಕ್ಕನೆ ನಿಂತು, ಅತಿ ಶ್ರದ್ಧೆಯಿಂದ ಕಿವಿಗೊಟ್ಟು ಕೇಳುತ್ತಿದ್ದನು.

"ಅದೇನು ಕಿವಿನಿಮಿರಿಸಿ ಕೇಳುತ್ತಿರುವಿ?" ಎಂದು ಸುಲ್ತಾನನು ಆಶ್ಚರ್ಯಭರಿತನಾಗಿ ಕೇಳಿದ. "ಗೂಬೆಗಳೆರಡು ಸಂಭಾಷಿಸುತ್ತಿವೆ! ಅದನ್ನು ಆಲಿಸುತ್ತಿರುವೆನು" ಎಂದ ಮಂತ್ರಿ.

"ನಿನಗೆ ಗೂಗೆಗಳ ಭಾಷೆ ಬರುವುದೇ?" ಎಂದು ಕೇಳಿದ ಸುಲ್ತಾನ. "ಹೂಂ, ಮಹಾಪ್ರಭೂ" ಎಂದು ಹೇಳಿ, ಮಂತ್ರಿ ಮತ್ತಷ್ಟು ಹೊತ್ತು ಕಿವಿಗೊಟ್ಟು ಕೇಳಿದನಂತರ "ಸಾಕಪ್ಪ ಸಾಕು. ಇನ್ನು ಇವುಗಳ ಸಂಭಾಷಣೆ ಕೇಳಲಾರೆ. ಕಿವಿಯಲ್ಲಿ ಸೀಸ ಸುರಿದ ಹಾಗಿದೆ! ನಡೆಯಿರಿ ಹೋಗೋಣ" ಎಂದ.

"ಅವು ಮಾತನಾಡಿಕೊಳ್ಳುತ್ತಿರುವ ವಿಷಯವೇನು?" ಮತ್ತೆ ಕೇಳಿದ ಸುಲ್ತಾನ.

"ಅಯ್ಯೋ, ಅದೇಕೆ ಕೇಳುವಿರಿ ಬಿಡಿ. ತಿಳಿಗೇಡಿ ಪಕ್ಷಿಗಳು. ಅವುಗಳ ಮಾತುಗಳನ್ನು ಲಕ್ಷ್ಯಕ್ಕೆ ತರಬೇಕಾದ ಪ್ರಮೇಯವಿಲ್ಲ" ಉದಾ

ಆರ್. ಕಮಲಾಕ್ಷಿ

ಶೀನನಾಗಿ ನುಡಿದ ಮಂತ್ರಿ. "ಅವು ಆಡುತ್ತಿರುವ ತಿಳಿಗೇಡಿ ಮಾತುಗಳು ನನಗೂ ತಿಳಿಸಬಾರ ದೇಕೆ?" ಎಂದ ಸುಲ್ತಾನ.

"ನಾನೇ ಕೇಳಲಾಗದಂತಹ ಕರ್ಣಕಠೋರ ವಾದ ಅಸತ್ಯವನ್ನು ಕೇಳಿ ನೀವು ಸಹಿಸಲಾರಿರಿ ಪ್ರಭೊ" ಎಂದ ಮಂತ್ರಿ.

"ಅಷ್ಟು ಕೀಳು ಮಟ್ಟದ ಮಾತುಗಳಾದರೆ ಆ ಗೂಗೆಗಳನ್ನು ದಂಡಿಸೋಣ. ಅವು ಆಡಿದ ಮಾತುಗಳನ್ನು ನನಗೆ ತಿಳಿಸು" ಎಂದು ಒತ್ತಾಯ ಪಡಿಸಿದ ಸುಲ್ತಾನ.

"ಹಾಗಾದರೆ ಕೇಳಿ. ಆ ಗೂಬೆಗಳು ಸಂಬಂಧ ಬೆಳೆಸಬೇಕೆಂದಿರುವುವು. ಹೆಣ್ಣು ಗೂಬೆಯ ತಾಯಿ ಯನ್ನು ಗಂಡುಗೂಬೆಯ ತಾಯಿ ವರದಕ್ಷಿಣೆ ಕೇಳುತ್ತಿದೆ. ತನ್ನ ಮಗನಿಗೆ ಐವತ್ತು ಪಾಳು ಬಿದ್ದ ಗ್ರಾಮಗಳನ್ನು ವರದಕ್ಷಿಣೆಯಾಗಿ ಕೊಡ ಬೇಕಂತೆ. ಬೇಕಾದರೆ ಐನೂರು ಗ್ರಾಮಗಳನ್ನು ಕೊಟ್ಟೇನು ಎಂದು ಹೇಳಿತು ಹೆಣ್ಣು ಗೂಬೆಯ ತಾಯಿ. ಐನೂರು ಪಾಳುಬಿದ್ದ ಗ್ರಾಮಗಳು ನಿನ ಗೆಲ್ಲಿ ಸಿಗುವುದೆಂದು ಪ್ರಶ್ನೆಮಾಡಿತು ಗಂಡು ಗೂಬೆಯ ತಾಯಿ. ಅದಕ್ಕೆ ಹೆಣ್ಣು ಗೂಬೆಯ ತಾಯಿ ಹೇಳಿತು, ಸುಲ್ತಾನರ ಪರಿಪಾಲನೆಯಲ್ಲಿ ಪಾಳುಬಿದ್ದ ಗ್ರಾಮಗಳಿಗೆ ಕೊರತೆ ಏನಿದೆ ಎಂದು" ಎಂದು ಸುಮ್ಮನಾದ ಮಂತ್ರಿ.

ಸುಲ್ತಾನನು ಬಾಯಿ ಬಿಡಲಿಲ್ಲ. ತನ್ನ ರಾಜ್ಯದ ಅವ್ಯವಸ್ಥೆಯನ್ನು ಸೂಚಿಸಲು ಮಂತ್ರಿ ಈ ನಾಟಕವಾಡಿದನೆಂದು ಸುಲ್ತಾನನು ಗ್ರಹಿಸಿ ದನು. ಇಬ್ಬರು ಒಂದಷ್ಟುದೂರ ನಡೆದರು. ಮಂತ್ರಿ ಮೌನವನ್ನು ಮುರಿದು "ಇಂತಹ ಅಯೋಗ್ಯ ಮಾತುಗಳನ್ನಾಡಿದುದಕ್ಕೆ ಆ ಗೂಗೆ ಗಳನ್ನು ದಂಡಿಸಬೇಕು, ಮಹಾಪ್ರಭೊ" ಎಂದ.

"ನಿನ್ನನ್ನು ಇಂದಿನಿಂದ ಪ್ರಧಾನ ಮಂತ್ರಿ ಯನ್ನಾಗಿ ನೇಮಿಸಿರುವೆವು. ಆ ಗಂಡು ಗೂಬೆಗೆ ನಮ್ಮ ರಾಜ್ಯದಲ್ಲಿ ವರದಕ್ಷಿಣೆ ಸಿಗದಂತೆ ನೋಡಿ ಕೊಳ್ಳಬೇಕು" ಎಂದ ಸುಲ್ತಾನ.

ಮಾರನೆಯ ದಿನದಿಂದ ಸುಲ್ತಾನನ ದಿನಚರಿ ಯಲ್ಲಿ ತುಂಬಾ ಬದಲಾವಣೆಗಳಾದುವು. ಸುಖ ಲಾಲಸೆಗಳನ್ನು ತ್ಯಜಿಸಿ, ರಾಜ್ಯಕಾರ್ಯಗಳನ್ನು ಶ್ರದ್ಧೆವಹಿಸಿ ಮಾಡುತ್ತಿದ್ದನು. ಅನೇಕ ಸುಧಾರಣೆ ಗಳನ್ನು ಜಾರಿಗೆ ತಂದನು. ರಾಜ್ಯದಲ್ಲಿ ಸುಖ ಶಾಂತಿಗಳು ನೆಲೆಸಿದವು.





# ಆಸ್ತಿ ವಿಭಾಗ

ಉಜ್ಜಯಿನಿಗೆ ಸಮೀಪದ ಒಂದು ಗ್ರಾಮದಲ್ಲಿ ಒಬ್ಬ ಗೌಡನಿದ್ದನು. ಆ ಗೌಡನು ಸುತ್ತಮುತ್ತಲಿದ್ದ ಒಂಭತ್ತು ಗ್ರಾಮಗಳಿಗೆ ನ್ಯಾಯಾಧಿಕಾರಿ. ಸಂಪನ್ನನೂ ಹೌದು. ಆತನಿಗೆ ನಾಲ್ಕು ಜನ ಗಂಡು ಮಕ್ಕಳು. ಅವರಲ್ಲಿ ಹಿರಿಯವನು ಮನೆಯ ಪಾರುಪತ್ಯವನ್ನು ವಹಿಸಿಕೊಂಡಿದ್ದ. ಎರಡನೆಯವನು ಪಶು ಪೋಷಣೆಯನ್ನೂ, ಮೂರನೆಯವನು ವ್ಯವಸಾಯವನ್ನೂ ಮಾಡಿಕೊಂಡಿದ್ದರು. ನಾಲ್ಕನೆಯವನಿಗೆ ವಿದ್ಯೆ, ದಾನ ಮತ್ತು ದೈವ ಕಾರ್ಯಗಳಲ್ಲಿ ಅತಿ ಆಸಕ್ತಿ.

ಕೆಲವು ವರ್ಷಗಳ ನಂತರ ಗೌಡನು ವೃದ್ಧನಾಗಿ ಹಾಸಿಗೆ ಹಿಡಿದ. ಆತನು ತನ್ನ ಮಕ್ಕಳನ್ನು ಕರೆದು "ಮಕ್ಕಳೇ, ಇಂದಿನವರೆವಿಗೂ ನಾವು ಅನ್ಯರ ವ್ಯಾಜ್ಯಗಳನ್ನು ಬಗೆ ಹರಿಸುತ್ತಿದ್ದೆವು. ನಮ್ಮ ಸಂಕಟಗಳನ್ನು ಮತ್ತೊಬ್ಬರ ಮುಂದೆ ಹೇಳಿಕೊಂಡಿದ್ದಿಲ್ಲ. ನನ್ನ ಕಾಲ ಮುಗಿಯುತ್ತಾ ಬಂತು. ನೀವು ನಾಲ್ವರೂ ಈ ಮಂಚದ ಒಂದೊಂದು ಕಾಲಿನಹತ್ತಿರ ಬಂದು ನಿಲ್ಲಿ. ನಾನು ಸತ್ತನಂತರ ನೀವು ನಿಂತಿದ್ದ ಸ್ಥಳಗಳನ್ನು ಅಗೆಯಿರಿ. ಹುಷಾರ್, ನಿಮ್ಮ ನಿಮ್ಮಲ್ಲಿ ಜಗಳ ಮಾಡಿಕೊಳ್ಳಬೇಡಿ" ಎಂದ.

ತಂದೆಯ ಮಾತಿನಂತೆ ತಲಾ ಒಂದೊಂದು ಕಾಲಿನಹತ್ತಿರ ನಾಲ್ವರೂ ಹೋಗಿ ನಿಂತರು.

"ನಾನು ಮಾಡಬೇಕಾದುದು ಮತ್ತೇನಾದರೂ ಉಳಿದಿದೆಯೇ?" ಎಂದು ತಂದೆ ಕೇಳಿದ. ಮತ್ತೇನೂ ಇಲ್ಲವೆಂದು ಮಕ್ಕಳು ಹೇಳಿದ ತರುವಾಯ 'ನಾರಾಯಣ ನಾರಾಯಣ' ಎಂದು ಜಪ ಮಾಡುತ್ತಾ ಗೌಡನು ನಿಶ್ಚಿಂತೆಯಾಗಿ ಪ್ರಾಣವನ್ನು ಬಿಟ್ಟನು. ತಂದೆಗೆ ಅಂತ್ಯಕರ್ಮಗಳನ್ನು ಮಾಡಿದ ಬಳಿಕ ನಾಲ್ವರು ಸಹೋದರರೂ ನಾಲ್ಕು ಪಾರಂಗಿಗಳನ್ನು ತೆಗೆದುಕೊಂಡು ತಂದೆ ಹೇಳಿದ್ದ ಪ್ರಕಾರವೇ ತಾವು ಹಿಂದೆ ನಿಂತಿದ್ದ ಸ್ಥಳಗಳ ಸುತ್ತಮುತ್ತ ಅಗೆಯಲಾರಂಭಿಸಿದರು. ಹಿರಿಯವನು ಅಗೆದ ಸ್ಥಳದಲ್ಲಿ ಕದಿರು ಸಿಕ್ಕಿತು. ಎರಡನೆಯವನು ಅಗೆದಲ್ಲಿ ಸೆಗಣಿ ಬಂತು. ಮೂರನೆಯವನು ಎಷ್ಟು ಅಗೆದರೂ ಮಣ್ಣು ಹೊರತು ಮತ್ತೇನೂ ಬರಲಿಲ್ಲ. ನಾಲ್ಕನೆಯವನು ತೋಡಿದಲ್ಲಿ ಬೆಳ್ಳಿಬಂಗಾರಗಳು ದೊರೆತವು.

ವಿ. ಕೇಶವಪುರಾಣಿಕ

ಅವನ್ನು ಕಂಡ ಉಳಿದ ಸಹೋದರರು ಅಸೂಯೆಗೊಂಡರು. "ನೋಡಿದಿರಾ, ಅಪ್ಪನಿಗೆ ಕಿರಿಯವನೆಂದರೆ ತುಂಬಾ ಅಭಿಮಾನ ಹೆಚ್ಚು. ಯಾವ ಕೆಲಸಕ್ಕೂ ಒದಗದವನಿಗೆ ಬೆಳ್ಳಿಬಂಗಾರಗಳನ್ನು ಕೊಟ್ಟು ನಮಗೆ ಕದಿರು, ಸಗಣಿ ಮತ್ತು ಮಣ್ಣು ತೋರಿಸಿದ್ದಾನೆ" ಎಂದು ಅಸಮಾಧಾನಗೊಂಡರು ಆ ಹುಡುಗರು.

"ಛೀ, ಅದೇತರ ಮಾತು. ನಮ್ಮ ನಮ್ಮ ಇಷ್ಟಪ್ರಕಾರ ಹೋಗಿ ನಿಂತುಕೊಂಡೆವು. ನೀವೆಲ್ಲರೂ ಹೋಗಿ ನಿಂತ ತರುವಾಯ ನಾನು ಉಳಿದಕಾಲಿನ ಹತ್ತಿರ ಹೋಗಿ ನಿಂತೆ. ಇದರಲ್ಲಿ ನನ್ನ ತಪ್ಪೇನೂ ಇಲ್ಲ. ನನ್ನ ಅದೃಷ್ಟ ಹೀಗಿದೆ, ನಿಮ್ಮ ಅದೃಷ್ಟ ಹಾಗಿದೆ. ಅದಕ್ಕೆ ಯಾರೇನು ಮಾಡಬಲ್ಲರು" ಎಂದು ಗಂಭೀರವಾಗಿ ನುಡಿದ.

"ಅದೆಲ್ಲಾ ಆಗದು. ಈ ವಿಷಯ ನ್ಯಾಯಾಸ್ಥಾನದಲ್ಲೇ ಬಗೆ ಹರಿಯಬೇಕು" ಎಂದರು ಅಣ್ಣಂದಿರು. ಅವರು ತಮ್ಮ ತಂದೆಯ ಕೊನೆಯ ಕೋರಿಕೆಯನ್ನು ತೃಣೀಕರಿಸಿಯೇಬಿಟ್ಟರು. ಉಜ್ಜಯಿನಿಗೆ ಹೋಗಿ ತಮ್ಮ ವ್ಯಾಜ್ಯವನ್ನು ನ್ಯಾಯಾಲಯಕ್ಕೆ ಒಯ್ದರು.

ನ್ಯಾಯಾಧಿಕಾರಿ ಅವರು ಹೇಳಿದುದನ್ನೆಲ್ಲಾ ಕೇಳಿ ಯಾದಮೇಲೆ "ನಿಮ್ಮ ತಂದೆಗೆ ಇದ್ದ ಆಸ್ತಿ ಏನು?" ಎಂದು ಕೇಳಿದ.

"ನಮ್ಮ ತಂದೆಗೆ ಹೊಲಗದ್ದೆಗಳು, ಪಶುಗಳು, ದವಸಧಾನ್ಯದ ವ್ಯಾಪಾರವೂ, ಒಂದಷ್ಟು ಬೆಳ್ಳಿ ಬಂಗಾರವೂ ಇತ್ತು," ಎಂದು ಗೌಡನ ಮಕ್ಕಳು ಹೇಳಿದರು.

"ಅವುಗಳನ್ನೇ ನಿಮ್ಮ ತಂದೆ ನಿಮಗೆ ಹಂಚಿದ್ದಾರೆ. ದವಸಧಾನ್ಯದ ವ್ಯಾಪಾರ ಹಿರಿಯವನದು. ಪಶುಸಂಪತ್ತು ಎರಡನೇಯವನದು; ಹೊಲಗದ್ದೆಗಳು ಮೂರನೇಯವನಿಗೆ ಸೇರಬೇಕು. ನಾಲ್ಕನೇಯುವನು ಬೆಳ್ಳಿ ಬಂಗಾರಗಳನ್ನು ತೆಗೆದುಕೊಳ್ಳ ತಕ್ಕದ್ದು. ಅವುಗಳನ್ನು ಹಂಚಿಕೊಂಡು ಸುಖವಾಗಿ ಬಾಳಿ," ಎಂದನು.

ಈ ತೀರ್ಪನ್ನು ಕೇಳಿ ಮೂವರು ಅಣ್ಣಂದಿರಿಗೂ ಆಶ್ಚರ್ಯ, ಮತ್ತು ಆನಂದವಾಯಿತು. ಸಮಾಧಾನವೂ ಆಯಿತು. ತಮ್ಮ ತಂದೆ ಕಿರಿಯವನಿಗೆ ಪ್ರತ್ಯೇಕವಾದ ಅಭಿಮಾನವನ್ನು ತೋರಿಸಿಲ್ಲವೆಂದು ಗ್ರಹಿಸಿ, ತಮ್ಮಗ್ರಾಮಕ್ಕೆ ಹಿಂತಿರುಗಿ ಅನ್ಯೋನ್ಯವಾಗಿ ಜೀವಿಸುತ್ತಿದ್ದರು.






ಒಂದೂರಿನಲ್ಲಿ ಒಬ್ಬ ಪುರೋಹಿತನಿದ್ದನು. ಆತನಿಗೆ ನಾಗವೇಣಿ ಎಂಬ ಮಗಳು. ಆಕೆ ತುಂಬಾ ಧೈರ್ಯಶಾಲಿ. ಒಂದು ದಿನ ಪುರೋಹಿತನೂ ಆತನ ಪತ್ನಿಯೂ ಎಲ್ಲಿಗೋ ಪೌರೋಹಿತ್ಯಕ್ಕೆ ಹೋಗಿ ಸಾಯಂಕಾಲವಾದರೂ ಹಿಂತಿರುಗಲಿಲ್ಲ.

ಸೂರ್ಯಾಸ್ತಮಯವಾದ ನಂತರ ನಾಗವೇಣಿ ಸಂಧ್ಯಾಸ್ನಾನ ಮಾಡಲು ಬಚ್ಚಲುಮನೆಗೆ ಹೋದಳು. ಸೂಕ್ಷ್ಮಬುದ್ಧಿಯುಳ್ಳ ಆ ಹುಡುಗಿ ಯಾರೋ ಹಂಡೆಯ ಹಿಂದೆ ಬಚ್ಚಿಟ್ಟುಕೊಂಡಿರುವುದನ್ನು ಗ್ರಹಿಸಿದಳು. ಗಲಭೆ ಮಾಡದೆ ಮೆಲ್ಲನೆ ಸ್ನಾನಗೃಹದಿಂದ ಹೊರಗೆ ಬಂದು ಮನೆಯೊಳಕ್ಕೆ ಹೋಗಿ ಬಾಗಿಲು ಹಾಕಿಕೊಂಡಳು.

ಮತ್ತಷ್ಟು ಕತ್ತಲೆಯಾದ ನಂತರ ಕಳ್ಳನು ಬಚ್ಚಲು ಮನೆಯಿಂದ ಹೊರಗೆ ಬಂದು ತಲೆ ಬಾಗಿಲನ್ನು ತಟ್ಟಿ "ಅಮ್ಮಾ" ಎಂದು ಮೆಲ್ಲನೆ ಕೂಗಿದ. ತಂದೆ ಬಂದಿರುವನೆಂದು ಭಾವಿಸಿ ನಾಗವೇಣಿ ಬಾಗಿಲು ತೆಗೆಯಬಹುದೆಂದು ಅವನು ಯೋಚಿಸಿದ್ದನು. ಬಾಗಿಲ ಕಿಂಡಿಯಿಂದ ಕಳ್ಳನನ್ನು ನೋಡಿದ ನಾಗವೇಣಿ "ಬಾಗಿಲಿನ ಅಗಳಿ ಬಿಮ್ಮಗೆ ಹಿಡಿದುಕೊಂಡಿದೆಯಪ್ಪಾ. ಅತ್ತಕಡೆಯಿರುವ ಕಿಟಕಿಯಿಂದ ನುಗ್ಗಿ ಅಗಳಿ ತೆಗೆದುಬಿಡು" ಎಂದಳು. ತನ್ನ ಯುಕ್ತಿ ಫಲಿಸಿತೆಂದು ಸಂತಸಗೊಂಡು ಕಳ್ಳನು ಪಕ್ಕದಲ್ಲಿದ್ದ ಕಿಟಕಿಯ ಬಳಿಗೆ ಬರುವಷ್ಟರಲ್ಲಿ ನಾಗವೇಣಿ ಕೊಡಲಿಯನ್ನು ಸಿದ್ಧಪಡಿಸಿಕೊಂಡು ಅಲ್ಲಿಗೆ ಬಂದು ನಿಂತಳು. ಕಳ್ಳನು ಕಿಟಕಿಯಲ್ಲಿ ತಲೆ ತೂರಿಸಿದ ತಕ್ಷಣ ಕಚಕ್ ಎಂದು ಹೊಡೆದಳು.

ನಂತರ ನಾಗವೇಣಿ ಕಳ್ಳನ ಮುಂಡವನ್ನು ತುಂಡು ತುಂಡಾಗಿ ಕತ್ತರಿಸಿ, ರುಂಡಮುಂಡಗಳನ್ನು ಬೇರೆಬೇರೆ ಚೀಲಗಳಲ್ಲಿಟ್ಟು ಬಿಗಿದಳು. ಅನಂತರ ದೀಪವನ್ನು ಆರಿಸಿ ಕುಳಿತುಕೊಂಡಳು. ಮತ್ತೆ ಸ್ವಲ್ಪ ಹೊತ್ತಾದ ತರುವಾಯ ಕಳ್ಳನ ಸಹಾಯಕರು ಬಾಗಿಲು ತಟ್ಟಿದರು. ನಾಗವೇಣಿ "ಯಾರದು?" ಎಂದು ಪಿಸುದನಿಯಲ್ಲಿ ಕೇಳಿದಳು.

"ಕೆಲಸ ಮುಗಿಯಿತೇ" ಎಂದು ಅವರು ಮೆಲುದನಿಯಲ್ಲಿ ಕೇಳಿದರು. "ಪಕ್ಕದ ಕಿಟಕಿಯ ಬಳಿಗೆ ಬಂದರೆ ಮೂಟೆಗಳನ್ನು ಕೊಡುತ್ತೇನೆ" ಎಂದು ನಾಗವೇಣಿ ಪಿಸುಗುಟ್ಟಿದಳು.

ಎಂ. ಹರಿಹರಪ್ಪ

ಕಳ್ಳರು ನಾಗವೇಣಿಯ ಸ್ವರವನ್ನು ಗುರು ತಿಸದಾದರು, ಅವರು ಪಕ್ಕದ ಕಿಟಕಿಯಬಳಿಗೆ ಬರಲು ನಾಗವೇಣಿ ಅವರಿಗೆ ಮೂಟೆಗಳನ್ನು ತೆಗೆದುಕೊಟ್ಟಳು.

"ಇನ್ನು ಹೋಗೋಣ ಬಾ" ಎಂದರು ಕಳ್ಳರು. "ಅಡಿಗೆ ಮನೆಯನ್ನೂ ಹುಡುಕಿ ನಿಮ್ಮ ಹಿಂದೆಯೇ ಬಂದುಬಿಡುತ್ತೇನೆ. ನೀವು ಹೋಗುತ್ತಿರಿ" ಎಂದಳು ನಾಗವೇಣಿ. ಕಳ್ಳರು ಮತ್ತೇನಿಲ್ಲದೆ ಕಂಬಿಕಿತ್ತರು.

ತುಂಬಾ ಹೊತ್ತಾದನಂತರ ತಂದೆತಾಯಿಗಳು ಬಂದರು. ನಾಗವೇಣಿ ಅವರೊಂದಿಗೆ ನಡೆದುದನ್ನೆಲ್ಲಾ ಹೇಳಿದಳು. ಅವರು ತಮ್ಮ ಮಗಳ ಧೈರ್ಯಸಾಹಸಗಳಿಗೆ ಸಂತೋಷಪಟ್ಟರಾದರೂ ಉಳಿದ ಕಳ್ಳರು ಎಲ್ಲಿ ತಮ್ಮ ಮಗಳ ಮೇಲೆ ಹಗೆಸಾಧಿಸುವರೋ ಎಂದು ಹೆದರಿದರು.

ಕಳ್ಳರು ಅಡವಿಯಲ್ಲಿದ್ದ ತಮ್ಮ ಮಾಳಿಗೆಯನ್ನು ಸೇರಿ ಮೂಟೆಗಳನ್ನು ಬಿಚ್ಚಿ ನೋಡಿ ತಮ್ಮ ಸಂಗಡಿಗನಿಗೆ ಆದ ಅವಸ್ಥೆಯನ್ನು ಗ್ರಹಿಸಿದರು. "ಇದೆಲ್ಲಾ ಆ ಪುರೋಹಿತನ ಮಗಳ ಕಾರುಭಾರು. ಅವಳಿಗೆ ತಕ್ಕ ಶಾಸ್ತಿ ಮಾಡಬೇಕು" ಎಂದು ಪಂತ ತೊಟ್ಟರು.

ಮಾರನೇಯ ದಿನ ಅವರು ಬಹಳ ಬೆಲೆಬಾಳುವ ಪೋಷಾಕುಗಳನ್ನು ಧರಿಸಿಕೊಂಡು, ಹುಚ್ಚಪ್ಪನೆಂಬ ಹೆಡ್ಡನಿಗೆ ಅಲಂಕಾರ ಮಾಡಿಸಿ, ಪುರೋಹಿತನ ಮನೆಗೆ ಬಂದರು.

"ಏನು ಪುರೋಹಿತರೇ ನಿಮ್ಮ ಮನೆಯಲ್ಲಿ ಮದುವೆಗೆ ಸಿದ್ಧಳಾದ ಹುಡುಗಿ ಇರುವಳಂತೆ.




ನಿಮ್ಮೊಂದಿಗೆ ಸಂಬಂಧ ಬೆಳೆಸುವ ಇಚ್ಛೆ ನಮಗಿದೆ. ಯಥೇಚ್ಛವಾಗಿ ಒಡವೆಗಳನ್ನು ಹಾಕುತ್ತೇವೆ. ಮದುವೆಯ ಖರ್ಚು ಸಹ ನಮಗಿರಲಿ" ಎಂದರು ಕಳ್ಳರು.

ಖರ್ಚಿಲ್ಲದೆ ಮಗಳ ಮದುವೆಯಾಗುವುದು ಸುಮ್ಮನಾಯಿತೇ? ಬೀಗರು ಧನಿಕರಾಗಿದ್ದಾರೆ.

ಕಳ್ಳರು ಹುಡುಗಿಯಮೇಲೆ ಸೇಡು ತೀರಿಸಿಕೊಳ್ಳುವ ಮೊದಲೇ ಮಗಳನ್ನು ಅತ್ತೆಯ ಮನೆಗೆ ಸಾಗಹಾಕುವುದು ಉತ್ತಮವೆಂದು ತೋರಿತು ತಂದೆಗೆ. ಈಗಿನ ಸ್ಥಿತಿಯಲ್ಲಿ ಈ ಸಂಬಂಧ ಉತ್ತಮವೆಂದು ಕಂಡುಬಂದುದರಿಂದ ಕೂಡಲೆ ಒಪ್ಪಿಕೊಂಡುಬಿಟ್ಟನು.

ನಾಗವೇಣಿ ತಂದೆಯೊಂದಿಗೆ "ಅಪ್ಪಾ, ಇವರ ಮಾತು ಕತೆ ನೋಡಿದರೆ ನಿನ್ನೆ ಬಂದಿದ್ದ

ಕಳ್ಳರಿರುವಂತೆ ತೋರುವರು" ಎಂದಳು. ಆದರೆ ಅವಳ ತಂದೆತಾಯಿಗಳು ಗದರಿಕೊಂಡರು.

"ಹುಚ್ಚುಚ್ಚಾಗಿ ಮಾತನಾಡಬೇಡ. ಕಳ್ಳರೆಲ್ಲಿಯಾದರೂ ಇಂತಹ ಬೆಲೆ ಬಾಳುವ ಬಟ್ಟೆಗಳನ್ನು ಹಾಕಿ ಕೊಳ್ಳುವರೇ? ಒಡವೆಗಳನ್ನು ಕೊಡಲು ಒಪ್ಪುವರೇ?" ಎಂದರು.

ಅಂದೇ ಮದುವೆಯಾಯಿತು. ಸಾಯಂಕಾಲ ಗಂಡಿನ ಕಡೆಯವರು ಮದುಮಗಳೊಂದಿಗೆ ಹಿಂತಿರುಗಿದರು. ಕತ್ತಲಾಗುವ ವೇಳೆಗೆ ಅವರು ಅಡವಿಯಲ್ಲಿದ್ದ ತಮ್ಮ ಮಾಳಿಗೆಯನ್ನು ಸೇರಿಕೊಂಡರು. "ಹಂತಕಳು ಈಗೆಲ್ಲಿಗೆ ಹೋಗುವಳು. ತಕ್ಷಣ ಅವಳನ್ನು ಕೊಂದುಬಿಡೋಣ" ಎಂದರು ಕೆಲವು ಜನ ಕಳ್ಳರು. ಈ ಮಾತನ್ನು ಕೇಳಿ ಹುಚ್ಚಪ್ಪ "ಇದೇನು ಅನ್ಯಾಯ. ನನಗೆ ಮದುವೆ ಮಾಡಿಸಿ, ಹೆಂಡತಿಯೊಂದಿಗೆ ಒಂದು ದಿನವಾದರೂ ಕಳೆಯಲು ಅವಕಾಶ ಕೊಡುವುದಿಲ್ಲವೇ?" ಎಂದು ಗೋಗರೆದ.

"ಸರಿ, ನಾಳೆ ಬೆಳಗಿನತನಕ ಅವಳು ಓಡಿಹೋಗದಂತೆ ನೋಡಿಕೊಳ್ಳುವ ಜವಾಬ್ದಾರಿ ನಿನ್ನದು. ನಾಳೆ ಬೆಳಗಾಗುತ್ತಲೇ ಅವಳ ತಲೆ ಕಡಿಯುವೆವು" ಎಂದರು ಕಳ್ಳರು.

ಕಳ್ಳರು ಕೆಳಗಿನ ಅಂತಸ್ತಿನಲ್ಲಿ ಮಲಗಿಕೊಂಡರು. ನಾಗವೇಣಿಯನ್ನು ಮಹಡಿಗೆ ಕಳುಹಿಸಿದರು. ಹುಚ್ಚಪ್ಪ ತುಂಬಾ ಸಡಗರದಿಂದ ಮೇಲಕ್ಕೆ ಬಂದನು. ನಾಗವೇಣಿ "ಅಬ್ಬಾ, ಇಲ್ಲಿ ಎಷ್ಟೊಂದು ಸೆಖೆ" ಎಂದಳು.

"ಹುಂ, ನೀನು ಹೊರಗೆ ಹೋಗಲು ಸಾಧ್ಯವಿಲ್ಲ. ಅವರು ಕೊಂದುಬಿಡುತ್ತಾರೆ" ಎಂದ





ಹುಚ್ಚಪ್ಪ ಭಯಭೀತನಾಗಿ. ಅದಕ್ಕೆ ಅವಳು "ಓ, ನೀವು ನನ್ನ ಯಜಮಾನರಲ್ಲವೇ, ತೋಟ ದಲ್ಲಿ ಒಂದು ಹತ್ತು ನಿಮಿಷ ಹಾಗೆ ಸುತ್ತಾಡಿ ಕೊಂಡು ಬರಲು ಅವಕಾಶ ಕೊಡಿ" ಎಂದಳು.

"ಓಡಿಹೋಗಲೋ? ನನಗೆ ಗೊತ್ತು ನಿನ್ನ ಉಪಾಯ" ಎಂದ ಹುಚ್ಚಪ್ಪ.

"ನಿಮಗಷ್ಟು ಅನುಮಾನವಾದರೆ ನನ್ನ ಸೊಂಟಕ್ಕೆ ಹಗ್ಗ ಬಿಗಿದು ಕಿಟಕಿಯ ಮೂಲಕ ಕೆಳಗೆ ಇಳಿಸಿ. ಸ್ವಲ್ಪಹೊತ್ತು ತಂಗಾಳಿ ಸೇವಿಸಿ ಹಗ್ಗವನ್ನು ಜಗ್ಗುವೆನು. ಆಗ ನೀವು ಮೇಲಕ್ಕೆ ಎಳೆದುಕೊಳ್ಳುವಿರಂತೆ" ಎಂದಳು.

ಈ ಹಂಚಿಕೆ ಹುಚ್ಚಪ್ಪನಿಗೆ ಹಿಡಿಸಿತು. ಅವನು ನಾಗವೇಣಿಯ ಸೊಂಟಕ್ಕೆ ಹಗ್ಗ ಬಿಗಿದು, ಕಿಟಕಿಯ ಮೂಲಕ ತೋಟದಲ್ಲಿ ಇಳಿಸಿದನು. ನಾಗವೇಣಿ ಕೆಳಗೆ ಇಳಿದ ಕೂಡಲೇ ಹಗ್ಗವನ್ನು ಬಿಚ್ಚಿಕೊಂಡು ಅಲ್ಲೇ ಇದ್ದ ಒಂದು ಕುರಿಯ ಸೊಂಟಕ್ಕೆ ಅದನ್ನು ಬಿಗಿದು ಕಟ್ಟಿದಳು.

ಕುರಿ ಹುಲ್ಲುಮೇಯುತ್ತಾ ಅತ್ತಿತ್ತ ತಿರುಗಾಡಲು ಹುಚ್ಚಪ್ಪನ ಕೈಗೆ ಸಿಕ್ಕಿಸಿಕೊಂಡಿದ್ದ ಹಗ್ಗ ಎಳೆದಂತಾಯಿತು. ಅವನು ಅದನ್ನು ಮೇಲಕ್ಕೆ ಎಳೆದ. ಕುರಿ "ಮ್ಯಾ, ಮ್ಯಾ" ಎಂದು ಕೂಗಲು ಪ್ರಾರಂಭಿಸಿತು. "ಉಷ್, ಸುಮ್ಮನಿರು. ಏಕೆ ಹಾಗೆ ಕುರಿಯಂತೆ ಕೂಗುವೆ? ಅವರು ಕೇಳಿಬಿಟ್ಟರೆ ನಮ್ಮಿಬ್ಬರನ್ನೂ ಸದೆ ಬಡಿಯುವರು" ಎಂದ ಹುಚ್ಚಪ್ಪ.

ಆದರೆ ಕುರಿ ಮತ್ತಷ್ಟು ಗಟ್ಟಿಯಾಗಿ ಕೂಗುತಿತ್ತು. ಹಾಗೂ ಹೀಗೂ ಹುಚ್ಚಪ್ಪ ಕುರಿಯನ್ನು




ಮೇಲಕ್ಕೆ ಎಳೆದು "ಅಯ್ಯೋ, ನನ್ನ ಹೆಂಡತಿ ಕುರಿಯಾಗಿಬಿಟ್ಟಳಪ್ಪೋ" ಎಂದು ಅಳಲು ಪ್ರಾರಂಭಿಸಿದನು.

ಕುರಿಯ ಕಿರಿಚಾಟ, ಹುಚ್ಚಪ್ಪನ ಗೋಳಾಟ ಕೇಳಿ ಕಳ್ಳರು ನಿದ್ದೆಯಿಂದ ಎಚ್ಚೆತ್ತು ಮೇಲಕ್ಕೆ ಬಂದು ನೋಡಿದರು. ಹುಚ್ಚಪ್ಪನನ್ನು ಮೋಸಗೊಳಿಸಿ ನಾಗವೇಣಿ ಪರಾರಿಯಾದಳೆಂದು ಗ್ರಹಿಸಿದರು. ಆಕೆಯನ್ನು ಹಿಡಿಯಲು ತಕ್ಷಣ ಅವರು ಕುದುರೆಗಳನ್ನೇರಿ ಹೊರಟರು.

ಅಡವಿಯಲ್ಲಿ ಸ್ವಲ್ಪದೂರ ಹೋದ ನಾಗವೇಣಿ ಕುದುರೆಯ ಗೊರಸಿನ ಸಪ್ಪಳ ಕೇಳಿ ಸಮೀಪದಲ್ಲಿದ್ದ ದೊಡ್ಡದೊಂದು ತೊಗ್ರೆಯನ್ನು ನೋಡಿ ಅದರಲ್ಲಿ ಸೇರಿ ಅವಿತುಕೊಂಡಳು. ಮರುಕ್ಷಣದಲ್ಲೇ ಕಳ್ಳರು ಬಂದರು. ಅವರಿಗೆ

ನಾಗವೇಣಿಯ ಸುಳಿವೇ ಸಿಗಲಿಲ್ಲ. ಅವರ ಲ್ಲೊಬ್ಬನು ತನ್ನ ಕತ್ತಿಯನ್ನು ಮರದ ತೊರ್ರೆಯೊಳಕ್ಕೆ ತೂರಿಸಿದನು. ಕತ್ತಿಯ ಮೊನೆ ನಾಗವೇಣಿಯ ಭುಜಕ್ಕೆ ಚುಚ್ಚಿಕೊಂಡಿತು. ಆದರೆ ಆಕೆ ಸ್ವಲ್ಪವಾದರೂ ಸದ್ದುಮಾಡಲಿಲ್ಲ. ಕಳ್ಳನು ಕತ್ತಿಯನ್ನು ಹೊರಗೆಳೆಯುವಾಗ ತನ್ನ ಸೀರೆಯಿಂದ ಕತ್ತಿಯನ್ನು ಒರೆಸಿದಳು. ಕತ್ತಿಗೆ ರಕ್ತದ ಕಲೆ ಅಂಟಿಕೊಳ್ಳದಿರುವುದನ್ನು ಕಂಡು ಕಳ್ಳನು ತೊರ್ರೆಯಲ್ಲಿ ಯಾರೂ ಇಲ್ಲವೆಂದು ಭಾವಿಸಿದನು.

ಕಳ್ಳರು ಬಹಳದೂರ ಹೋದಮೇಲೆ ನಾಗವೇಣಿ ತೊರ್ರೆಯಿಂದ ಹೊರಬಿದ್ದು ರಾಜಮಾರ್ಗವನ್ನು ಸೇರಿದಳು. ಆಕೆಗೆ ಮತ್ತೆ ಕುದುರೆಗಳ ಗೊರಸಿನ ಧ್ವನಿ ಕೇಳಿಸಿತು. ಅದೇ ಸಮಯಕ್ಕೆ ಒಂದು ಹುಲ್ಲಿನ ಗಾಡಿ ಅತ್ತಕಡೆ ಬಂದಿತು.

"ಅಣ್ಣಾ, ಅಣ್ಣಾ. ಕಳ್ಳರು ಅಟ್ಟಿಸಿಕೊಂಡು ಬರುತ್ತಿರುವರು. ನನ್ನನ್ನು ಹುಲ್ಲಿನಲ್ಲಿ ಬಚ್ಚಿಡಲಾರೆಯಾ?" ಎಂದು ಗಾಡಿಯವನನ್ನು ಅಂಗಲಾಚಿದಳು. ಅವನು ನಾಗವೇಣಿಯನ್ನು ಹುಲ್ಲಿನಲ್ಲಿ ಮರೆಮಾಡಿ ಏನೂ ಅರಿಯದವನಂತೆ ಹಾಡಿಕೊಳ್ಳುತ್ತಾ ಗಾಡಿ ಹೊಡೆಯುತ್ತಿದ್ದ. ಕಳ್ಳರು ಅಲ್ಲಿಗೆ ಬಂದು ಗಾಡಿಯವನನ್ನು ತಡೆದು "ಏಯ್, ಇತ್ತಕಡೆ ಯಾರಾದರೂ ಮದುಮಗಳು ಬಂದಳೇ?" ಎಂದು ಕೇಳಿದರು. "ಏನು, ಮದುಮಗಳೇ? ಇಲ್ಲ, ನಾನು ಯಾರನ್ನೂ ನೋಡಲಿಲ್ಲ" ಎಂದಗಾಡಿಯವನು ಶಾಂತವಾಗಿ.

ಸಂಶಯ ನಿವಾರಣೆಗಾಗಿ ಒಬ್ಬ ಕಳ್ಳನು ತನ್ನ ಕತ್ತಿಯನ್ನು ಹುಲ್ಲಿನೊಳಕ್ಕೆ ನಾಲ್ಕೈದುಬಾರಿ ಚುಚ್ಚಿ ನೋಡಿದ. ನಾಗವೇಣಿಯ ಕಾಲಿಗೆ ಒಂದು



ಸಾರಿ ಕತ್ತಿತಾಕಿ ರಕ್ತ ಸುರಿಯಿತು. ಹಿಂದೆ ಮಾಡಿದಂತೆಯೇ ನಾಗವೇಣಿ ಕತ್ತಿಯನ್ನು ಸೀರೆಯಿಂದ ಒರೆಸಿದಳು. ಕತ್ತಿಯಮೇಲೆ ರಕ್ತದ ಚಿನ್ಹೆ ಇಲ್ಲದಿರುವುದನ್ನು ಕಂಡು ಕಳ್ಳರು ತೃಪ್ತರಾಗಿ ಹಿಂದಕ್ಕೆ ಹೊರಟರು.

ನಾಗವೇಣಿ ಕಳ್ಳರ ಹಿಡಿತದಿಂದ ತಪ್ಪಿಸಿಕೊಂಡು ಬೆಳಗಾಗುವ ವೇಳೆಗೆ ತಂದೆಯ ಮನೆ ಸೇರಿಕೊಂಡಳು. ಮಗಳನ್ನು ಕಂಡು ತಂದೆಗೆ ಗರಬಡಿದಂತಾಯಿತು.

"ಲೇ, ಮಗೂ, ಹೇಗೆ ಬಂದೆಯೇ? ನಿನ್ನ ಗಂಡನೆಲ್ಲಿ? ಒಬ್ಬಳೇ ಬಂದೆಯಾ? ಮೈತುಂಬಾ ಗಾಯಗಳಾಗಿದೆಯಲ್ಲೆ. ಈ ರಕ್ತದ ಕಲೆಗಳೇನು?" ಎಂದು ಹೆದರಿದ ಪುರೋಹಿತನು ಪ್ರಶ್ನೆಗಳ ಮಳೆಯನ್ನೇ ಸುರಿಸಿದನು.

"ಅಪ್ಪಾ, ನಾನು ಆಗಲೇ ಹೇಳಲಿಲ್ಲವೇ ಅವರು ಕಳ್ಳರು ಅಂತ. ನೀವು ಕೇಳಲಿಲ್ಲ. ಅವರು ನನ್ನನ್ನು ಕೊಲ್ಲಲು ಯತ್ನಿಸಿದರು. ಆದರೆ ದೇವರ ಕೃಪೆಯಿಂದ ತಪ್ಪಿಸಿಕೊಂಡು ಬಂದೆ" ಎಂದು ನಾಗವೇಣಿ ನಡೆದುವನ್ನೆಲ್ಲಾ ತಂದೆಗೆ ಹೇಳಿದಳು.

ಪುರೋಹಿತನು ತನ್ನ ಅವಿವೇಕಕ್ಕೆ ತುಂಬಾ ನೊಂದುಕೊಂಡನು. "ಈಗಲೂ ನಮಗೆ ಹಾನಿ ತಪ್ಪಿಲ್ಲ. ನನ್ನನ್ನು ಒಂದು ಗುಟ್ಟಾದ ಸ್ಥಳದಲ್ಲಿ ಬಚ್ಚಿಡು. ಕಳ್ಳರು ನನ್ನನ್ನು ಹುಡುಕಿಕೊಂಡು ಬರುವುದು ಖಂಡಿತ. ಅವರು ಕಳ್ಳರೆಂದು ನಿನಗೆ ತಿಳಿದಿರುವ ವಿಷಯ ತೋರಗೊಡದೆ, ಉಪಾಯವಾಗಿ ಅವರನ್ನು ರಾಜಭಟರಿಗೆ ಹಿಡಿದು ಕೊಡು" ಎಂದಳು ನಾಗವೇಣಿ.




ಪುರೋಹಿತನು ನಾಗವೇಣಿಯನ್ನು ಒಂದು ಹಂಡೆಯಲ್ಲಿ ಬಚ್ಚಿಟ್ಟು, ಆ ಊರಿನ ಸರದಾರನ ಹತ್ತಿರ ಹೋಗಿ ನಡೆದ ವಿಷಯವನ್ನೆಲ್ಲಾ ತಿಳಿಸಿ "ಅಯ್ಯಾ, ಇಪ್ಪತ್ತು ಜನ ಭಟರನ್ನು ಮಾರುವೇಷದಲ್ಲಿ ಕಳುಹಿಸಿಕೊಡಿ. ನಾನು ಕಳ್ಳರನ್ನು ಹಿಡಿದು ಕೊಡುತ್ತೇನೆ" ಎಂದ.

ಅಂತಲೇ ಸಾಮಾನ್ಯ ಪೋಷಾಕಿನಲ್ಲಿ ಕೆಲವು ಜನ ಭಟರು ಪುರೋಹಿತನ ಮನೆಗೆ ಬಂದು ಚಾಪೆಯಮೇಲೆ ಕುಳಿತು ಲೋಕಾಭಿರಾಮವಾಗಿ ಮಾತನಾಡುತ್ತಿದ್ದರು.

ಇಷ್ಟರಲ್ಲಿ ಉತ್ತಮ ಪೋಷಾಕನ್ನು ಧರಿಸಿದ್ದ ಕಳ್ಳರು ಸವಾರಿಮಾಡಿಕೊಂಡು ಪುರೋಹಿತನ ಮನೆಗೆ ಬಂದರು. ಅವರನ್ನು ಕಂಡಾ ಕ್ಷಣ ಪುರೋಹಿತನು ಲಗು ಬಗೆಯಿಂದ ಎದ್ದು ಹೋಗಿ



"ದಯಮಾಡಿಸಿ, ದಯಮಾಡಿಸಿ!" ಎಂದು ಹೇಳುತ್ತಾ, ಅಡಿಗೆಯ ಮನೆಕಡೆತಿರುಗಿ " ಲೇ, ಬೀಗರು ಬಂದಿದ್ದಾರೆ, ಕಾಲು ತೊಳೆದು ಕೊಳ್ಳಲು ನೀರುತಾರೆ" ಎಂದು ಪತ್ನಿಯನ್ನು ಕೂಗಿ ಕರೆದನು.

"ನಾವು ಅವಸರದ ಕೆಲಸದಮೇಲೆ ಬಂದಿದ್ದೇವೆ. ಕಾಲಾವಕಾಶವಿಲ್ಲ" ಎಂದ ಒಬ್ಬ ಕಳ್ಳ.

"ಮಗು ಸೌಖ್ಯವಾಗಿರುವಳಷ್ಟೇ?" ಎಂದು ಕೇಳಿದ ಪುರೋಹಿತ.

ನಾಗವೇಣಿ ತಂದೆಯ ಮನೆಗೆ ಬಂದಿಲ್ಲವೆಂದು ಕಳ್ಳರು ಖಚಿತಪಡಿಸಿಕೊಂಡು "ಮಗು ಸೌಖ್ಯವಾಗಿರುವಳು. ಸುಖವಾಗಿರುವೆನೆಂದು ನಿಮಗೂ ನಿಮ್ಮ ಪತ್ನಿಗೂ ತಿಳಿಸುವಂತೆ ಹೇಳಿದಳು. ಅದಕ್ಕೇ ಇತ್ತ ಬಂದೆವು. ಸರಿ, ನಾವಿನ್ನು ಹೊರಡುತ್ತೇವೆ. ನಮಗೆ ಬಹಳ ತುರ್ತ ಕಾರ್ಯಗಳಿವೆ," ಎಂದ ಮತ್ತೊಬ್ಬ ಕಳ್ಳ.

"ಮನೆಯವರೆವಿಗೂ ಬಂದು ಊಟಮಾಡದೆ ಹೋಗುವುದುಂಟೇ? ಒಂದು ನಿಮಿಷದಲ್ಲಿ ಅಡಿಗೆಯಾಗುತ್ತದೆ. ಒಳಗೆಬನ್ನಿ" ಎಂದು ಪುರೋಹಿತನು ನಿರ್ಬಂಧಗೊಳಿಸಿದನು. ಗತ್ಯಂತರವಿಲ್ಲದೆ ಕಳ್ಳರು ಮನೆಯೊಳಕ್ಕೆ ಪ್ರವೇಶಿಸಿದರು. ಅಲ್ಲಿ ತಿವಾಸಿಗಳಮೇಲೆ ಕುಳಿತಿದ್ದ ಜನ ಕಳ್ಳರ ಕಣ್ಣಿಗೆ ಬಿದ್ದರು. ಅವರಿಗೆ ಸ್ವಲ್ಪ ಅನುಮಾನವುಂಟಾಗಿ "ಇವರೆಲ್ಲಾ ಯಾರು?" ಎಂದು ಪುರೋಹಿತನನ್ನು ಕೇಳಿದರು.

"ನಾಗವೇಣಿಯ ಮದುವೆಯ ಸುದ್ದಿ ಕೇಳಿ ನೋಡಲು ಬಂದ ನಮ್ಮ ಬಂಧುಗಳು" ಎಂದು ಪುರೋಹಿತನು ಕಳ್ಳರನ್ನು ರಾಜಭಟರಿಗೆ ಪರಿಚಯ ಮಾಡಿಸುತ್ತ "ಇವರೇ ನಮ್ಮ ಬೀಗರು. ಒಟ್ಟಾಗಿ ಬಂದಿದ್ದಾರೆ"ಎಂದ.

ಮರುಕ್ಷಣವೇ ರಾಜಭಟರು ಕಳ್ಳರನ್ನು ಸುತ್ತುಗಟ್ಟಿ, ಯಾರೂ ಓಡಿ ಹೋಗದಂತೆ ಹಿಡಿದು ಬಂಧಿಸಿ ಎಲ್ಲರನ್ನೂ ಠಾಣೆಗೆ ಕರೆದು ಕೊಂಡು ಹೋದರು.

ತರುವಾಯ ನಾಗವೇಣಿ ಸರದಾರನಿಗೆ ಅಡವಿಯಲ್ಲಿದ್ದ ಕಳ್ಳರ ಗುಪ್ತಸ್ಥಾನವನ್ನು ತೋರಿಸಿದಳು. ಅಲ್ಲಿ ಶೋಧಿಸಲಾಗಿ ಕಳ್ಳರು ಅವಿತಿಟ್ಟಿದ್ದ ಹಣ ಹೇರಳವಾಗಿ ಸಿಕ್ಕಿತು. ಅದರಲ್ಲಿ ಕೊಂಚ ಭಾಗವನ್ನು ಸರದಾರನು ನಾಗವೇಣಿಗೆ ಬಹುಮಾನವಾಗಿ ಕೊಟ್ಟನು.





# ಸರದಾರನ ತಮ್ಮ

ಒಂದೂರಿನಲ್ಲಿ ಒಬ್ಬ ರೈತ. ಆತನಿಗೆ ಒಬ್ಬ ಮಗನಿದ್ದನು. ರೈತನಿಗೆ ಬಹಳ ವರ್ಷಗಳು ಕಳೆವ ನಂತರ, ಇಳಿವಯಸ್ಸಿನಲ್ಲಿ ಮತ್ತೊಬ್ಬ ಮಗನು ಜನಿಸಿದನು. ಎರಡನೆ ಮಗನು ಹಸುಳೆಯಾಗಿರುವಾಗಲೇ ರೈತನ ಹಿರಿಯಮಗನು ರಾಜಧಾನಿಗೆ ಹೋಗಿ, ರಾಜಭಟನಾಗಿ ಆಸ್ಥಾನದಲ್ಲಿ ನೌಕರಿಗೆ ಸೇರಿಕೊಂಡ. ಕಾಲಕ್ರಮೇಣ ಅವನು ಸರದಾರನ ಪದವಿಗೇರಿದನು.

ಈ ವೇಳೆಗೆ ಕಿರಿಯವನೂ ಬೆಳೆದು ದೊಡ್ಡವನಾಗಿ ಅಣ್ಣನಂತೆಯೇ ತಾನೂ ರಾಜಧಾನಿಗೆ ಬಂದು ರಾಜಭಟನ ಹುದ್ದೆಯನ್ನು ದೊರಕಿಸಿಕೊಂಡ. ಒಂದುದಿನ ಅವನು ಕುದುರೆ ಏರಿ ಬರುತ್ತಿದ್ದ ತನ್ನ ಅಣ್ಣನನ್ನು ಗುರುತಿಸಿ "ಅಣ್ಣಾ, ನಾನು ನಿನ್ನ ತಮ್ಮ. ರಾಜಭಟನ ಹುದ್ದೆಯಲ್ಲಿರುವೆನು" ಎಂದ. ಆದರೆ ಸರದಾರನು ತನ್ನ ತಮ್ಮನನ್ನು ಗುರುತು ಹಿಡಿಯಲಾರದೆ "ಯಾರೋ ನೀನು? ಸರಿ ಅತ್ತಕಡೆ" ಎಂದು ಕಾಲಿನಿಂದ ಒದ್ದು ಮುಂದಕ್ಕೆ ಕುದುರೆಯನ್ನು ಓಡಿಸಿದನು. ಆ ಸಮಯದಲ್ಲಿ ಸುತ್ತಲೂ ಇದನ್ನು ನೋಡುತ್ತಿದ್ದ ತಮ್ಮನ ಸಹೋದ್ಯೋಗಿಗಳು ನಗುವನ್ನು ತಡೆದುಕೊಳ್ಳಲಾರದೆ ಪಕ್ಕನೆ ನಕ್ಕುಬಿಟ್ಟರು. ಅಣ್ಣನ ವರ್ತನೆಯಿಂದ ತಮ್ಮನಿಗೆ ಅಪಾರ ವ್ಯಥೆಯೂ, ಅವಮಾನವೂ ಆಯಿತು. ರಾಜಭಟನಾಗಿ ಕೆಲಸ ಮಾಡುವಷ್ಟು ಕಾಲವೂ ಅಣ್ಣನನ್ನು ಸಂದರ್ಶಿಸಬೇಕಾದುದು ಅನಿವಾರ್ಯ. ಆತನನ್ನು ಕಂಡಾಗಲೆಲ್ಲಾ ಒಂದುರೀತಿ ಸಂಕಟವಾಗುವುದು ದಿಟ. ಆದುದರಿಂದ ತಾನು ಇಲ್ಲಿರಬಾರದೆಂದು ಯೋಚಿಸಿ, ತಮ್ಮನು ಯಾರಿಗೂ ಹೇಳದೆ ಕೇಳದೆ ತನ್ನ ಕೆಲಸವನ್ನು ತೊರೆದು ಓಡಿಹೋದನು. ಗೆಡ್ಡೆಗೆಣಸುಗಳನ್ನು ತಿಂದುಕೊಂಡು ಅರಣ್ಯದಲ್ಲೇ ಜೀವಿಸಿಕೊಂಡಿದ್ದನು.

ಹೀಗೆ ಕೆಲವು ದಿನಗಳಾದ ನಂತರ ರಾಜನು ಬೇಟೆಯಾಡಲು ತನ್ನ ಪರಿವಾರದೊಂದಿಗೆ ಅಡವಿಗೆ ಬಂದನು. ಆ ಅಡವಿಯಲ್ಲಿ ಒಂದು ಬಲಿತ ಜಿಂಕೆ ರಾಜನ ಸೂಕ್ಷ್ಮದೃಷ್ಟಿಗೆ ಬಿದ್ದು, ಮರುಕ್ಷಣವೇ ಮಾಯವಾಯಿತು. ರಾಜನು ತನ್ನ ಕುದುರೆಯೇರಿ ಅದನ್ನು ಹಿಂಬಾಲಿಸಿದನು. ಜಿಂಕೆ ಸ್ವಲ್ಪದೂರ ಓಡಿ, ಅಡ್ಡವಾಗಿ ಬಂದ ಪ್ರವಾಹ

ಪಿ. ಡಿ. ರಾವ್



ವನ್ನು ದಾಟಿ, ನದಿಯ ಆಚೆ ದಡದಲ್ಲಿದ್ದ ಗೊಂಡಾರಣ್ಯದಲ್ಲಿ ಮಾಯವಾಯಿತು. ರಾಜನು ಅವನ್ನು ಹಿಡಿಯಲೇ ಬೇಕೆಂಬ ಛಲದಿಂದ ಪ್ರವಾಹವನ್ನು ದಾಟಿ, ಆ ಅರಣ್ಯವನ್ನು ಪ್ರವೇಶಿಸಿದನು.

ಜಿಂಕೆಯ ಸುಳಿವೇ ಸಿಗಲಿಲ್ಲ. ಎಲ್ಲೆಲ್ಲೂ ಅಂಧಕಾರ ಹರಡಿತ್ತು. ಎಷ್ಟುದೂರ ಹೋದರೂ ಕಾಲುಹಾದಿಯೂ ಕಾಣಿಸಲಿಲ್ಲ. ರಾಜನಿಗೆ ತಾನು ಯಾವ ದಿಕ್ಕಿನಲ್ಲಿ ಬಂದಿರುವೆನೋ ತಿಳಿಯದಾಯಿತು. ಆತನು ಚಿಂತಿಸುತ್ತಿರಲು, ಸರದಾರನ ತಮ್ಮ ಅಕಸ್ಮಾತ್ತಾಗಿ ಆತನ ದೃಷ್ಟಿಗೆ ಬಿದ್ದನು.

"ಯಾರಪ್ಪಾ, ನೀನು? ಇಲ್ಲಿಗೇಕೆ ಬಂದೆ?" ಎಂದು ಸರದಾರನ ತಮ್ಮ ರಾಜನನ್ನು ಕೇಳಿದ.

"ನಾನು ಮಹಾರಾಜರ ಆಸ್ಥಾನದಲ್ಲಿ ಒಬ್ಬ ನೌಕರ. ಬೇಟೆಯಾಡಲು ಬಂದು ದಾರಿತಪ್ಪಿದೆ. ನನಗೆ ಈ ಅರಣ್ಯದಿಂದ ಪಾರಾಗುವ ಮಾರ್ಗ ತೋರಿಸುವೆಯಾ?" ಎಂದು ಅತಿ ವಿನಯದಿಂದ ಕೇಳಿಕೊಂಡ ರಾಜ.

"ಹೊತ್ತು ಮೀರಿದೆ. ಈ ರಾತ್ರಿ ಬೆಳಗಾದ ಕೂಡಲೇ ನಿನಗೆ ದಾರಿ ತೋರಿಸುವೆನು" ಎಂದು ಸರದಾರನ ತಮ್ಮ ಸಮಾಧಾನ ಮಾಡಿ ಮುಂದೆ ನಡೆದ. ರಾಜನು ಅವನನ್ನು ಅನುಸರಿಸಿದ. ಅವರು ಬಹುದೂರ ನಡೆದು ಒಂದು ಸಣ್ಣ ಗುಡಿಸಲನ್ನು ಸೇರಿಕೊಂಡರು. "ಉಸ್ಸಪ್ಪಾ, ಸದ್ಯ ಉಳಿದುಕೊಂಡೆವು. ಈ ರಾತ್ರಿಯನ್ನು ಇಲ್ಲಿಯೇ ಕಳೆಯಬಹುದು" ಎಂದ ಸರದಾರನ ತಮ್ಮ. ಆ ಗುಡಿಸಲು ಒಬ್ಬ ಮುದುಕಮ್ಮನದು.

"ಅಜ್ಜೀ, ನಮಗೆ ಕೂಡಲೇ ಎಲೆ ಹಾಕು. ಹಸಿವು ದಹಿಸುತ್ತಿದೆ" ಎಂದ ಸರದಾರನ ತಮ್ಮ.

"ನನಗೇ ಇಲ್ಲ. ನಿಮಗೆಲ್ಲಿಂದ ಊಟವಿಡಲಿ ಮಗೂ" ಎಂದಳಾ ಮುದುಕಿ.

ಸರದಾರನ ತಮ್ಮ ಒರೆಯಿಂದ ಕತ್ತಿಯನ್ನು ತೆಗೆದು "ಎಲೆ ಮುದಿಗೂಬೆ, ನಿನ್ನ ಆಟ ನನ್ನಲ್ಲಿ ಸಾಗದು. ತಲೆ ಹಾರಿಸಿಬಿಟ್ಟೇನು," ಎಂದ.

ಮುದುಕಿ ಭಯದಿಂದ ನಡುಗಿದಳು. ಕೂಡಲೇ ಒಳಗೆ ಹೋಗಿ ಅವರಿಬ್ಬರಿಗೆ ಎಲೆ ಹಾಕಿದಳು. ಇಬ್ಬರೂ ಹೊಟ್ಟೆತುಂಬಾ ಉಂಡರು.

"ಅಜ್ಜೀ, ನಮಗೆ ಮಲಗಿಕೊಳ್ಳಲು ಸ್ಥಳ ತೋರಿಸು" ಎಂದ ಸರದಾರನ ತಮ್ಮ.

"ಅಪ್ಪಾ, ನೀವು ಈ ಗುಡಿಸಿಲಿನಲ್ಲಿ ನೆಲದ ಮೇಲೆ ಮಲಗಿಕೊಳ್ಳಲಾರಿರಿ. ಹಿತ್ತಲಲ್ಲಿ ಒಂದು ಅಟ್ಟವಿದೆ. ಅಲ್ಲಿ ಒಳ್ಳೇ ಗಾಳಿ ಬರುತ್ತದೆ.

ನೀವಿಬ್ಬರೂ ಅಲ್ಲಿ ಹಾಯಾಗಿ ಮಲಗಿಕೊಂಡು ನಿದ್ದೆಮಾಡಿರಿ" ಎಂದಳು ಮುದುಕಿ.

ಮನೆಯ ಹಿಂದೆ ಒಂದು ಅಟ್ಟವಿತ್ತು. ಅದರ ಮೇಲೇರಲು ಒಂದು ಏಣಿಯೂ ಇತ್ತು. ಸರದಾರನ ತಮ್ಮ ಮತ್ತು ರಾಜನು ಅದರಮೇಲೇರಿ ಕುಳಿತುಕೊಂಡರು.

ಇಬ್ಬರೂ ನಿದ್ರೆಮಾಡುವುದು ಸುರಕ್ಷಿತವಲ್ಲ. ನಾನು ಮೊದಲು ನಿದ್ದೆಮಾಡುತ್ತೇನೆ. ನೀನು ಎಚ್ಚರವಾಗಿದ್ದು ಏನಾದರೂ ಸಂಶಯ ಬಂದರೆ ನನ್ನನ್ನು ಎಬ್ಬಿಸು. ಒಂದಷ್ಟು ಹೊತ್ತು ನಿದ್ರೆಯಾದನಂತರ ನಾನು ಕಾವಲು ಕಾಯುತ್ತಿರುತ್ತೇನೆ, ನೀನು ನಿದ್ದೆಮಾಡುವಿಯಂತೆ" ಎಂದ ಸರದಾರನ ತಮ್ಮ. ಮರುಮಾತನಾಡದೆ ರಾಜನು ಅವನ ಮಾತಿಗೆ ಒಪ್ಪಿಕೊಂಡ.

ಸರದಾರನ ತಮ್ಮ ಕಣ್ಣುಮುಚ್ಚಿ ಮಲಗಿಕೊಂಡನಾದರೂ ನಿದ್ದೆಮಾಡಲಿಲ್ಲ. ಸ್ವಲ್ಪ ಹೊತ್ತಿಗೆ ಅವನು ಕಣ್ಣು ತೆರೆದು ನೋಡಲು ರಾಜನು ಕುಳಿತುಕೊಂಡಿದ್ದಕಡೆಯೇ ತೂಕಡಿಸುತ್ತಿದ್ದಾನೆ. ಇದನ್ನು ಕಂಡು ಸರದಾರನ ತಮ್ಮ ತಟಕ್ಕನೆದ್ದು ರಾಜನ ಬೆನ್ನಿನಮೇಲೆ ಒಂದೇಟು ಬಿಗಿದು "ಇದೇಯೋ ನೀನು ಕಾವಲು ಕಾಯುವುದು? ರಾಜಭಟನಾಗಿ ಕೆಲಸಮಾಡಲಾರದವನಿಗೆ ಆಸ್ಥಾನದಲ್ಲಿ ಕೆಲಸ ಹೇಗೆ ಕೊಟ್ಟರು?" ಎಂದು ಮೂದಲಿಸಿದ.

ರಾಜನು ಪಶ್ಚಾತ್ತಾಪವನ್ನು ನಟಿಸುತ್ತಾ "ಇಲ್ಲ, ಇಲ್ಲ, ಎಚ್ಚರವಾಗಿಯೇ ಇದ್ದೆ" ಎಂದು ತಡಬಡಿಸಿದ. ಹಗಲು ಪೂರಾ ಕಾಡಿನಲ್ಲಿ ಬೇಟೆಯಾಡಿದನಾದುದರಿಂದ ತುಂಬಾ ಬಳ





ಲಿಕೆಯಾಗಿ ಆಯಾಸಗೊಂಡಿದ್ದನಾಗಿ ರಾಜನ ಕಣ್ಣುಗಳು ಮುಚ್ಚಿಕೊಳ್ಳುತ್ತಿದ್ದುವು. ಎಷ್ಟೇ ಪ್ರಯಾಸಪಟ್ಟರೂ ನಿದ್ದೆಯನ್ನು ತಡೆಯಲಾಗ ಲಿಲ್ಲ. ನಿದ್ದೆಯ ಜೊಂಪಿನಲ್ಲಿ ಒಂದುಕಡೆ ವಾಲಿ ನಿದ್ದೆ ಮಾಡಲಾರಂಭಿಸಿದ ರಾಜ.

ಅರ್ಧ ರಾತ್ರಿ ವೇಳೆಗೆ ಸರಿಯಾಗಿ ಕೆಲವು ಕಳ್ಳರು ಆ ಗುಡಿಸಲಿಗೆ ಬಂದರು. ಪ್ರತಿ ರಾತ್ರಿ ಅವರೆಲ್ಲರೂ ಬಂದು ಕೂಡುವ ಸಂಕೇತ ಸ್ಥಳವದು. "ಅವ್ವಾ, ಊಟವಿಡು" ಎಂದರು ಕಳ್ಳರು, ತಾವು ಕದ್ದುತಂದ ಮಾಲನ್ನೆಲ್ಲಾ ಒಂದು ಮೂಲೆಯಲ್ಲಿಟ್ಟು.

"ಏನಿಡಲಿ? ನಿಮಗಾಗಿ ಮಾಡಿದ ಅಡಿಗೆಯ ನ್ನೆಲ್ಲಾ ಯಾರೋ ಇಬ್ಬರು ದುರುಳರು ಬಂದು ತಿಂದುಬಿಟ್ಟರು. ಇಲ್ಲವೆಂದು ಹೇಳಿದೆ. ಸಾಯಿಸು ವೆನೆಂದು ಹೆದರಿಸಿದರು," ಎಂದಳು ಮುದುಕಿ.

"ಹಾಂ, ಯಾರು ಅವರು? ಎಲ್ಲಿದ್ದಾರೆ?" ಎಂದು ಕೇಳಿದರು ಕಳ್ಳರು ಕುಪಿತಗೊಂಡು.

"ಯಾರೋ ಏನೊ ನನಗೆ ತಿಳಿಯದು. ಅಟ್ಟದಮೇಲೆ ಮಲಗಿ ನಿದ್ದೆ ಮಾಡುತ್ತಿದಾರೆ" ಎಂದಳು ವೃದ್ಧೆ.

"ನಾನು ಹೋಗಿ ಅವರ ವಿಷಯ ವಿಚಾರಿಸಿ ಕೊಳ್ಳುತ್ತೇನೆ," ಎಂದು ಒಬ್ಬ ಕಳ್ಳ ಹೊರಟ. ಅವನು ಏಣಿಯನ್ನು ಹತ್ತುತ್ತಿರುವಾಗ, ಅಟ್ಟ ಅಲುಗಾಡುತ್ತಿರುವುದನ್ನು ಗಮನಿಸಿದ ಸರದಾ ರನ ತಮ್ಮ, ಕತ್ತಿಯನ್ನು ಹಿರಿದು ಸಿದ್ಧನಾದ.

ಕಳ್ಳನು ನಿಶ್ಚಿಂತೆಯಾಗಿ ಗಬಗಬನೆ ಏರಿ ಬಂದ. ಅವನ ತಲೆ ತುಸಕಾಣಿಸಿದ ಕೂಡಲೇ ತಮ್ಮನು ಒಂದೇ ಏಟಿಗೆ ಅವನರುಂಡವನ್ನು ಛೇದಿಸಿ ಶವವನ್ನು ಮೇಲಕ್ಕೆ ಎಳೆದುಕೊಂಡನು.

ತಮ್ಮ ಜೊತೆಗಾರನು ಎಷ್ಟು ಹೊತ್ತಾದರೂ ಬಾರದಿರಲು ಮತ್ತೊಬ್ಬ ಕಳ್ಳನು ಬಂದ. ಅವ ನನ್ನೂ ಸಹ ಸರದಾರನ ತಮ್ಮ ಕೊಂದುಬಿಟ್ಟ. ಈರೀತಿ ಒಬ್ಬೊಬ್ಬರಾಗಿ ಕಳ್ಳರೆಲ್ಲರೂ ಅವನ ಕತ್ತಿಗೆ ಬಲಿಯಾದರು.

ಬೆಳಗಿನಜಾವ ರಾಜನು ನಿದ್ದೆಯಿಂದ ಎಚ್ಚೆ ತ್ತನು. ಸಾಲಾಗಿ ಬಿದ್ದಿದ್ದ ಕಳ್ಳರ ಶವಗಳನ್ನು ಕಂಡು ಬೆರಗಾದನು. ಸರದಾರನ ತಮ್ಮ ನಡೆದು ದನ್ನೆಲ್ಲಾ ರಾಜನಿಗೆ ತಿಳಿಸಿದನು. ಇಬ್ಬರೂ ಅಟ್ಟ ದಿಂದ ಇಳಿದು ಬಂದರು.

"ಏಯ್, ಮುದಿಗೂಬೆ, ನೀನು ಮಾಡು ವುದು ಈ ಪಾಪಕೆಲಸವೇ? ನಿನ್ನ ಗ್ರಹಚಾರ

ಬಿಡಿಸುತ್ತೇನೆ ಇರು. ಎಲ್ಲಿ, ಕಳ್ಳರು ತಂದು ಕೊಟ್ಟ ಮಾಲು ಹೊರಗಿಡು" ಎಂದು ಸರದಾರನ ತಮ್ಮ ಮುದುಕಿಯನ್ನು ಬೆದರಿಸಿದ.

ಮುದುಕಿ ಕೊಪ್ಪರಿಗೆಯಲ್ಲಿದ್ದ ನಗ ನಾಣ್ಯಗಳನ್ನು ಹೊರಗೆ ತೆಗೆದಿಟ್ಟಳು. ಸರದಾರನ ತಮ್ಮ ತಾನು ಹೊರಲಾಗುವಷ್ಟನ್ನು ಅಂಗವಸ್ತ್ರದಲ್ಲಿ ಮೂಟೆ ಕಟ್ಟಿಕೊಂಡು, ಇನ್ನಷ್ಟನ್ನು ಕಿಸೆಯಲ್ಲಿ ತುರುಕಿಕೊಂಡನು. ರಾಜನನ್ನೂ ಸಹ ತೆಗೆದುಕೊಳ್ಳುವಂತೆ ಬಲವಂತ ಮಾಡಿದನು.

"ಮಹಾರಾಜರ ಭಂಡಾರದಲ್ಲಿ ಹಣಕ್ಕೇನೂ ಕೊರತೆಯಿಲ್ಲ. ನನಗೇನೂ ಬೇಡ" ಎಂದ ರಾಜ. ತರುವಾಯ ಸರದಾರನ ತಮ್ಮ ರಾಜನಿಗೆ ಅಡವಿಯನ್ನು ದಾಟುವ ಮಾರ್ಗ ತೋರಿಸಿ "ಈ ಮಾರ್ಗದಲ್ಲೇ ನೆಟ್ಟಗೆ ಹೋಗು. ನಗರ ಸಿಗುತ್ತದೆ" ಎಂದ. ರಾಜನು ಅವನಿಗೆ ತನ್ನ ವಂದನೆಗಳನ್ನು ಹೇಳಿ "ಎಂದಾದರೂ ನಮ್ಮ ಮನೆ ಕಡೆ ಬಾ. ನಿನಗೆ ಲಾಭವುಂಟಾಗುವ ಉಪಾಯ ತೋರಿಸುವೆನು" ಎಂದ.

"ನಿನ್ನ ಹತ್ತಿರವೇಕೆ ಮುಚ್ಚುಮರೆ. ನಾನು ನಗರದಲ್ಲಿ ಕಾಲಿಟ್ಟರೆ ನನ್ನನ್ನು ಜೈಲಿಗೆ ಹಾಕುತ್ತಾರೆ. ಒಂದಾನೊಂದು ಕಾಲದಲ್ಲಿ ನಾನೂ ರಾಜಭಟನಾಗಿ ಕೆಲಸ ಮಾಡಿಕೊಂಡಿದ್ದೆ. ಒಂದು ಪ್ರಸಂಗದಿಂದ ಜಿಗುಪ್ಸೆಗೊಂಡು ಓಡಿ ಬಂದುಬಿಟ್ಟೆ" ಎಂದು ಸರದಾರನ ತಮ್ಮ ತನ್ನ ಅಣ್ಣನ ವಿಷಯವನ್ನೂ, ಆತನು ತನ್ನನ್ನು ಗುರುತಿಸಲಾರದೆ ಅವಮಾನ ಪಡಿಸಿದುದನ್ನೂ ರಾಜನೊಂದಿಗೆ ಬಿಡಿಸಿ ಹೇಳಿದ. "ಮಹಾರಾಜರು ನನ್ನ ಮಾತನ್ನು ತೆಗೆದು ಹಾಕಲಾರರು. ಅವ



ರೊಂದಿಗೆ ನಿನ್ನ ಶೌರ್ಯ ಸಾಹಸಗಳನ್ನು ಕುರಿತು ಹೇಳಿದರೆ ನಿನ್ನ ತಪ್ಪನ್ನು ಮನ್ನಿಸಿ, ನಿನಗೆ ಭಾರಿ ಬಹುಮಾನವನ್ನು ಕೊಡುವರು. ಇದೋ, ಈ ಉಂಗುರ ತೋರಿಸಿದರೆ ನೀನು ನೆಟ್ಟಗೆ ದರ್ಬಾರಿಗೆ ಪ್ರವೇಶ ಮಾಡಲೂಬಹುದು. ಒಮ್ಮೆ ಬಾ. ಅಲ್ಲಿ ನಾನು ಇರುತ್ತೇನೆ" ಎಂದು ಹೇಳಿ ಒಂದು ಉಂಗುರವನ್ನು ಸರದಾರನ ತಮ್ಮ ನಿಗೆ ಕೊಟ್ಟು, ರಾಜನು ಹೊರಟುಹೋದನು.

ಕೆಲವು ದಿನಗಳಾದನಂತರ ಸರದಾರನ ತಮ್ಮ ಆಸ್ಥಾನಕ್ಕೆ ಹೋಗಲು ನಿರ್ಧರಿಸಿ, ಪ್ರಯಾಣ ಬೆಳೆಸಿದನು. ಆತನು ನಗರವನ್ನು ಪ್ರವೇಶಿಸಿದ ಮರುಕ್ಷಣದಿಂದ ಪ್ರತಿ ನೌಕರನೂ, ಆತನಿಗೆ ವಂದಿಸಿ, ಆಸ್ಥಾನಕ್ಕೆ ದಾರಿ ತೋರಿಸುತ್ತಿದ್ದನು. ಸರದಾರನ ತಮ್ಮ ತನ್ನ ಕಿಸೆಯಲ್ಲಿದ್ದ ಹಣವನ್ನು ರಾಜಭಟರಿಗೆ ಭಕ್ಷೀಸು ಕೊಡುತ್ತಾ ಬಂದನು.

ಆಸ್ಥಾನ ಸಮೀಪಿಸುತ್ತಿದ್ದಂತೆ ಸಲಾಂ ಮಾಡುವ ಗುಲಾಮರ ಸಂಖ್ಯೆ ಅಧಿಕವಾಗು ತಿತ್ತು. "ಎಲಾ, ನೋಡಿದೆಯಾ, ಆ ಮನುಷ್ಯ ತುಂಬಾ ತಿಳಿಗೇಡಿ ಇದ್ದಾನೆ. ನನಗೆ ಗುಡಿಸಲಿ ನಲ್ಲಿ ಅಪಾರ ಹಣ ಲಭಿಸಿದೆ ಎಂದು ಅರಮನೆ ಆಸ್ಥಾನದಲ್ಲಿರುವವರಿಗೆಲ್ಲಾ ಹೇಳಿಬಿಟ್ಟಿದ್ದಾನೆ. ಅದಕ್ಕೆಂತಲೇ ಇವರೆಲ್ಲರೂ ನನ್ನನ್ನು ಸರದಾರ ನನ್ನು ಕಂಡಂತೆ ನೋಡುತ್ತಿದ್ದಾರೆ" ಎಂದು ಕೊಂಡ ಮನಸ್ಸಿನಲ್ಲಿ.

ಆವರೆ ಆಸ್ಥಾನದಲ್ಲಿ ಅಡಿಯಿಟ್ಟ ಕೂಡಲೇ ಸಿಂಹಾಸನವನ್ನೇರಿ ಕುಳಿತಿದ್ದ ರಾಜನನ್ನು ಕಂಡು ಅವನು ಸ್ತಂಭಿತನಾದನು. ಆತನಿಗೆ ಆಗ ಎಲ್ಲವೂ ಅರ್ಥವಾಯಿತು "ಅಲೆಲೆ. ಕಾವಲು ಸರಿಯಾಗಿ ಕಾಯಲಿಲ್ಲವೆಂದು ನಾನು ಹೊಡೆದಿದ್ದು ಮಹಾ ರಾಜರನ್ನೇ!" ಎಂದು ಚಕಿತನಾದ.

ಆವರೆ ಮಹಾರಾಜನು ಸರದಾರನ ತಮ್ಮ ನನ್ನು ಸ್ವಾಗತಿಸಿ, ಆತನ ಧೈರ್ಯಸಾಹಸ ಗಳನ್ನು ಸಭಿಕರಿಗೆ ವರ್ಣಿಸಿ, ತನ್ನ ಪ್ರಾಣವನ್ನು ಕಾಪಾಡಿದ ಪುಣ್ಯಾತ್ಮನೆಂದು ಪರಿಚಯ ಮಾಡಿ ಸಿದನು. ಮತ್ತು ಆತನಿಗೆ ಮುಖ್ಯಸರದಾರನ ಪದವಿಯನ್ನು ಕೊಟ್ಟನು.

ಸರದಾರನ ಪದವಿಯಲ್ಲಿದ್ದು ಗರ್ವಿಷ್ಠನಾದ ಅಣ್ಣನನ್ನು ಆ ಪದವಿಯಿಂದ ತೊಲಗಿಸಿ, ಸಾಮಾನ್ಯ ಭಟನನ್ನಾಗಿ ನೇಮಿಸಿದನು. ತಮ್ಮನ ಕೈಕೆಳಗೆ ಅಣ್ಣನಿರಬೇಕಾಯಿತು.






ಅಕ್ಬರ್ ಚಕ್ರವರ್ತಿಯ ಆಸ್ಥಾನದಲ್ಲಿ ಬೀರಬಲನು ವಿದೂಷಕನಾಗಿಯೂ, ಅಂತರಂಗ ಸಚಿವನಾಗಿಯೂ ಇದ್ದನು. ತಾನಸೇನನು ಸಂಗೀತ ವಿದ್ವಾಂಸನಾಗಿದ್ದನು. ತಾನಸೇನನ ಸಂಗೀತವನ್ನು ಕೇಳಲು ದೇಶವಿದೇಶಗಳಿಂದ ಪ್ರಮುಖರು ಬಂದು, ಆತನ ವಿದ್ವತ್ತನ್ನು ಹೊಗಳುತ್ತಿದ್ದರು.

ಈ ಪಾಂಡಿತ್ಯಕ್ಕೆ ತಾನಸೇನನೇನೂ ಗರ್ವ ಪಡುತ್ತಿರಲಿಲ್ಲ. ಆದರೆ ಉಳಿದ ಮುಸಲ್ಮಾನರಿಗೆ ತಾನಸೇನನ ಸಮಾನರು ಪ್ರಪಂಚದಲ್ಲಿ ಮತ್ತೊಬ್ಬರಿಲ್ಲವೆಂದು ಹೆಮ್ಮೆ. ಬೀರಬಲನನ್ನು ಸಚಿವ ಸ್ಥಾನದಿಂದ ಎತ್ತಿಹಾಕಿ, ಆ ಸ್ಥಳದಲ್ಲಿ ತಾನಸೇನನನ್ನು ನೇಮಿಸುವುದು ಯುಕ್ತವೆಂದು ಆಗಾಗ ಅಕ್ಬರನಿಗೆ ಸೂಚಿಸುತ್ತಿದ್ದರು. ಈ ಸೂಚನೆಯನ್ನು ಕೇಳಿದ ಅಕ್ಬರನು ಅಸಮಾಧಾನಗೊಂಡು "ನೀವು ಏನಾದರೂ ಹೇಳಿ. ಬೀರಬಲನಂತಹ ಮೇಧಾವಿ ಸಿಕ್ಕುವುದು ಅಸಂಭವ" ಎಂದು ಉತ್ತರ ಹೇಳುತ್ತಿದ್ದನು.

ಕೊಂಚದಿನಗಳಾದ ಮೇಲೆ ಮುಸಲ್ಮಾನರು ಒಂದು ಸಭೆಯನ್ನು ಏರ್ಪಡಿಸಿದರು. ಆ ಸಭೆಗೆ ಚಕ್ರವರ್ತಿಯನ್ನೂ ಆಹ್ವಾನಿಸಿದ್ದರು. ಅಂದು ವಿಪರೀತ ಸೆಖೆ ಮತ್ತು ತಾಪವಿತ್ತು. ಹಣತೆಗಳಲ್ಲಿ ಎಣ್ಣೆ ಮತ್ತು ಬತ್ತಿಗಳು ಇದ್ದರೂ ಸಹ ಅವುಗಳನ್ನು ಹಚ್ಚಿರಲಿಲ್ಲ. ಕೋಣೆಯಲೆಲ್ಲಾ ಕತ್ತಲೆ ಆವರಿಸಿತ್ತು. ಆಗ ತಾನಸೇನನು ದೀಪಕರಾಗವನ್ನು ಹಾಡಿದ. ದೀಪಗಳೆಲ್ಲವೂ ಅವಷ್ಟಕ್ಕೆ ಅವೇ ಹೊತ್ತಿಕೊಂಡವು. ಮೇಘಮಲ್ಲಾರ ರಾಗ ಹಾಡಿದ. ಕೂಡಲೇ ಸೆಖೆ ಕಡಿಮೆಯಾಗಿ, ಮಳೆ ಸುರಿಯಿತು.

ಚಕ್ರವರ್ತಿಯು ವಿಸ್ಮಯಗೊಂಡುದನ್ನು ನೋಡಿ ಒಬ್ಬ ಮುಸಲ್ಮಾನ ವೃದ್ಧನು "ಪ್ರಭೊ, ಈಗಲಾದರೂ ತಿಳಿಯಿತೆ? ಬೀರಬಲನಿಗೆ ಇಂತಹ ಪ್ರಜ್ಞೆಯಿದೆಯೇ? ಅದರಿಂದಲೇ ತಾನಸೇನನು ಮಂತ್ರಿ ಪದವಿಗೆ ಅರ್ಹನೆಂದು ಲೋಕವೇ ಸಾರಿ ಹೇಳುತ್ತಿದೆ" ಎಂದು ಮನವಿಮಾಡಿಕೊಂಡನು.

ಆಗ ಅಕ್ಬರನು "ತಾನಸೇನನು ಮಹಾ ಪಂಡಿತನಾಗಿರಬಹುದು. ಆದರೆ ಬೀರಬಲನನ್ನು ಸರಿಗಟ್ಟಲಾರನು. ಬೇಕಾದರೆ ಇದನ್ನು ಸಾದೃಶ್ಯ ಪಡಿಸುವೆನು" ಎಂದು ಖಚಿತವಾಗಿ ನುಡಿದ.

ಬಿ. ಭುಜಂಗರಾವು




ಕೆಲವು ದಿನಗಳಾದಮೇಲೆ ಅಕ್ಬರನು ಆವಾ ದೇಶದ ರಾಜನಿಗೆ ಕಾಗದವೊಂದನ್ನು ಬರೆದನು. ಆ ಕಾಗದಕ್ಕೆ ರಾಜಮುದ್ರೆಯನ್ನುಹಾಕಿ, ಬೀರಬಲ ತಾನಸೇನರನ್ನು ಕರೆದು "ನೀವಿಬ್ಬರೂ ಈ ಕಾಗದವನ್ನು ತೆಗೆದುಕೊಂಡು ಹೋಗಿ ಆವಾ ದೇಶದ ರಾಜನಿಗೆ ಕೊಡಬೇಕು. ಇದು ಅತ್ಯಂತ ಗೋಪ್ಯವಾದ ಕಾರ್ಯ" ಎಂದು ಒಂದು ಲಕೋಟೆಯನ್ನು ಕೊಟ್ಟನು.

ಅವರಿಬ್ಬರೂ ಆವಾದೇಶಕ್ಕೆ ಹೊರಟರು. ತಾನಸೇನನು ಮನಸ್ಸಿನಲ್ಲಿ "ಇದು ಯಾವುದೋ ಅತ್ಯಂತ ಮುಖ್ಯವಾದ ಕಾರ್ಯವಾಗಿರಬೇಕು. ಅಂತೂ ನನ್ನ ಸಂಗೀತ ಪಾಂಡಿತ್ಯವನ್ನು ಆ ರಾಜನಿಗೆ ತೋರಿಸಿ, ಆತನಿಂದ ಬಹುಮಾನ ಪಡೆಯುವೆನು" ಎಂದು ಸಂತೋಷಚಿತ್ತನಾದನು. ಆದರೆ ಬೀರಬಲನು "ಇದರಲ್ಲೇನೋ ರಹಸ್ಯ ವಿರಲೇಬೇಕು" ಎಂದು ಯೋಚನಾಮಗ್ನನಾದನು. ಅವರಿಬ್ಬರೂ ಅನೇಕ ಅರಣ್ಯಗಳನ್ನು ದಾಟಿ ಆವಾ ರಾಜನನ್ನು ಸಂದರ್ಶಿಸಿದರು.

ಕಾಗದ ಓದಿಕೊಂಡ ರಾಜ. ಅದರಲ್ಲಿ ಹೀಗಿತ್ತು: 'ನನ್ನ ಸೇವಕರಿಬ್ಬರು ನಿಮ್ಮದರ್ಶನ ಪಡೆಯಲು ಈ ಕಾಗದ ತೆಗೆದುಕೊಂಡು ಬರುತ್ತಾರೆ. ಒಂದು ಮಹಾಪರಾಧ ಮಾಡಿದರಾದುದರಿಂದ ಅವರನ್ನು ದಂಡಿಸಬೇಕಾಗಿದೆ. ಗುಪ್ತವಾಗಿ ನೆರವೇರಬೇಕಾದ ಕಾರ್ಯವಾದುದರಿಂದ ಇಲ್ಲಿ ಅದನ್ನು ಸಾಧಿಸಲು ಅವಕಾಶವಿಲ್ಲದೆ ನಿಮ್ಮ ಬಳಿಗೆ ಕಳುಹಿಸಿ ಕೊಟ್ಟಿರುವೆನು. ನೀವು ಅವರಿಗೆ ಮರಣದಂಡನೆ ವಿಧಿಸಬೇಕು.'

ರಾಜನು ಓದಿ ಮುಗಿಸಿ, ಆ ಕಾಗದವನ್ನು ಮಂತ್ರಿಯ ಕೈಗೆ ಕೊಟ್ಟನು. ಆತನಿಗೆ ಇದರಲ್ಲಿ ಏನೋ ರಹಸ್ಯವಿರಬೇಕೆಂದು ತೋರಿತು.

"ಮಹಾಪ್ರಭೂ, ಇವರನ್ನು ಒಂದು ವಾರ ಸೆರೆಯಲ್ಲಿರಿಸಿ, ಆ ತರುವಾಯ ಯುಕ್ತವಾದ ಶಿಕ್ಷೆ ವಿಧಿಸೋಣ" ಎಂದು ಸಲಹೆ ಕೊಟ್ಟ. ಆ ಪ್ರಕಾರ ಅವರ ಕೈಗಳಿಗೆ ಸಂಕೋಲೆಗಳನ್ನು ತೊಡಿಸಿ ಕಾರಾಗೃಹಕ್ಕೆ ಕರೆದೊಯ್ದರು.

ತಾನಸೇನನಿಗೆ ಹುಚ್ಚು ಹಿಡಿದಂತಾಯಿತು. ಬೀರಬಲನ ಕಡೆ ದೈನ್ಯದಿಂದ 'ಈಗೇನು ಉಪಾಯ?' ಎಂಬಂತೆ ನೋಡಿದ. ಆಗ ಬೀರಬಲನು ಆತನ ಕಿವಿಯಲ್ಲಿ ಏನೋ ಉಸಿರಿದನು. ಮನಸ್ಸಿನಲ್ಲಿ ಬೇಗುದಿಗೊಂಡಿದ್ದರೂ ಬೀರಬಲನ ಮಾತನ್ನು ಕೇಳಿ ತಾನಸೇನನು ಹೊರಗೆ ಧೈರ್ಯ

ವನ್ನು ತೋರಿಸುತ್ತಿದ್ದನು. ಹೀಗೆಯೇ ಒಂದು ವಾರದ ಅವಧಿ ಮುಗಿಯಿತು. ಬಳಿಕ ತಳ ವಾರರು ಅವರಿಬ್ಬರನ್ನೂ ಬಲಿವೇದಿಕೆ ಬಳಿಗೆ ಕರೆದುಕೊಂಡು ಹೋದರು. ಅಲ್ಲಿ ಬೀರಬಲ ಮತ್ತು ತಾನಸೇನರು "ನನ್ನನ್ನು ಮೊದಲು ಸಾಯಿಸಿ" "ನನ್ನನ್ನು ಮೊದಲು ಸಾಯಿಸಿ" ಎಂದು ಜಗಳವಾಡಲು ಪ್ರಾರಂಭಿಸಿದರು. ತಳ ವಾರರು ಇವನ್ನು ಕಂಡು ಬೆರಗಾಗಿ ರಾಜನ ಬಳಿಗೆ ಹೋಗಿ "ಪ್ರಭೂ, ಇವರಿಬ್ಬರೂ ಹುಚ್ಚ ರಿದ್ದಾರೆ" ಎಂದು ಮನವಿ ಮಾಡಿಕೊಂಡರು.

ಆಗ ರಾಜನು ಬೀರಬಲ ತಾನಸೇನರನ್ನು ಆಸ್ಥಾನಕ್ಕೆ ಬರಮಾಡಿಕೊಂಡು "ನೀವು ಜಗಳ ವಾಡಲು ಕಾರಣವೇನು?" ಎಂದು ಕೇಳಿದನು.

"ಮಹಾರಾಜ, ಹೇಳಿದರೆ ನಮಗೆ ತುಂಬಾ ಅನ್ಯಾಯವಾಗುವುದು. ಆದಕಾರಣ ನಾವು ಹೇಳ ಲಿಷ್ಟಪಡುವುದಿಲ್ಲ" ಎಂದ ಬೀರಬಲ್.

"ನಿಜ ಹೇಳದಿದ್ದರೆ ಯಾವಜ್ಜೀವ ಖೈದು ಹಾಕಿಸುವೆನು" ಎಂದ ರಾಜ.

ಬೇರೇನೂ ಗತ್ಯಂತರವಿಲ್ಲವೆಂಬಂತೆ ಬೀರ ಬಲನು ಮೆಲುದನಿಯಲ್ಲಿ ಹೀಗೆಂದು ಹೇಳಿದ: "ರಾಜನೇ, ಬಹಳ ದಿನಗಳಿಂದ ಆವಾ ರಾಜ್ಯ ವನ್ನು ತಮ್ಮ ಸಾಮ್ರಾಜ್ಯಕ್ಕೆ ಸೇರಿಸಿಕೊಳ್ಳ ಬೇಕೆಂದು ನಮ್ಮ ಪ್ರಭುಗಳು ಆಶಿಸುತ್ತಿರುವರು. ಆದರೆ ತಾವು ತುಂಬಾ ಬಲಶಾಲಿಗಳೆಂದು ಹೆದರು ತ್ತಿರುವರು. ಒಂದು ದಿನ ಭಾರಿ ಜ್ಯೋತಿಷಿ ಯೊಬ್ಬನು ಆಸ್ಥಾನಕ್ಕೆ ಬಂದು 'ಮಹಾಪ್ರಭೂ, ಚಿಂತಿಸುವಿರೇಕೆ? ನಿಮ್ಮ ಪ್ರಜೆಗಳಲ್ಲಿ ಯಾರಾದ



ರಿಬ್ಬರನ್ನು ಆವಾ ರಾಜನ ಹತ್ತಿರಕ್ಕೆ ಯಾವು ದಾದರೊಂದು ನೆಪದಿಂದ ಕಳುಹಿಸಿ. ಅವರನ್ನು ಆ ರಾಜನೇನಾದರೂ ಕೊಂದನೋ, ಮೊದಲು ಸತ್ತಾತ ಆ ದೇಶದ ರಾಜನಾಗುವನು. ತರು ವಾಯ ಮರಣಿಸಿದಾತನೇ ಮಂತ್ರಿಯಾಗುವನು. ಆಗ ಅವರು ನಿಮಗೆ ಸಾಮಂತರಾಗಿರುವರು. ಈರೀತಿ ನಿನಗೆ ಆ ರಾಜ್ಯವು ಸಿಗಬೇಕು. ಯುದ್ಧ ಮಾಡಿ ಗೆಲ್ಲುವುದು ನಿನ್ನಿಂದ ಆಗದ ಮಾತು' ಎಂದು ಹೇಳಿದ. ಈ ಕಾರಣದಿಂದಲೇ ನಮ್ಮಿಬ್ಬ ರನ್ನು ನಿಮ್ಮಬಳಿಗೆ ಕಳುಹಿಸಿದ್ದಾರೆ. ಈ ವಿಷಯ ಬಯಲು ಮಾಡಿದುದಕ್ಕೆ ನಮ್ಮ ಪ್ರಭುಗಳು ನಮ್ಮನ್ನು ಗಲ್ಲಿಗೇರಿಸುವುದು ಖಂಡಿತ. ಆದುದ ರಿಂದ ನಾವು ಮತ್ತೆ ಹಿಂತಿರುಗದಂತೆ ನಮ್ಮನ್ನು ನೀವೇ ಗಲ್ಲಿಗೇರಿಸಿಬಿಡಿ."

ಆಗ ಮಂತ್ರಿ ರಾಜನ ಕಿವಿಯಲ್ಲಿ "ಮಹಾ ಪ್ರಭೂ, ಇವರಿಬ್ಬರ ಜಗಳದಿಂದ ನಮಗೆ ರಹಸ್ಯ ವೆಲ್ಲಾ ತಿಳಿಯಿತು. ಇವರನ್ನು ಸಾಯಿಸಿದರೆ ನಮ್ಮ ರಾಜ್ಯ ನಮ್ಮ ಕೈಬಿಡುವುದು ಖಂಡಿತ. ಆದುದರಿಂದ ಇವರನ್ನು ಇವರ ದೇಶಕ್ಕೇ ಸಾಗ ಹಾಕುವುದು ಉತ್ತಮ" ಎಂದ. ಆ ಮಾತಿ ನಂತೆ ರಾಜನು ಬೀರಬಲನೊಂದಿಗೆ "ಅಯ್ಯಾ, ನಿಮ್ಮನ್ನು ಕೊಲ್ಲುವಂತೆ ನಿಮ್ಮ ರಾಜರು ನಮಗೆ ಕಾಗದ ಬರೆದಿರುವರು. ನಾವೇನೂ ಅವರ ಸೇವಕರಲ್ಲ. ನಿರ್ದೋಷಿಗಳನ್ನು ಕೊಂದ ಪಾಪ ನಮಗೆ ಅಂಟಿಕೊಳ್ಳುವುದು ಬೇಡ. ನೀವೇ ಈ ಮರಣದಂಡನೆ ವಿಧಿಸಿ, ಎಂದು ನಾವು ಹೇಳಿದಂತೆ ನಿಮ್ಮ ಪ್ರಭುಗಳಿಗೆ ಹೇಳಿ. ಸರಿ, ಇನ್ನು ನೀವು ಇಲ್ಲಿಂದ ಹೊರಡಬಹುದು" ಎಂದ.

ಆಗ ಬೀರಬಲನು "ಮಹಾರಾಜ, ಇದು ತಮಗೆ ನ್ಯಾಯವಲ್ಲ. ನಾನು ಮೊದಲೇ ಮನವಿ ಮಾಡಿಕೊಳ್ಳಲಿಲ್ಲವೇ, ನಮ್ಮ ರಹಸ್ಯ ಬಯಲು ಮಾಡಿದರೆ ನಮಗೆ ಹಾನಿಯಾಗುವುದೆಂದು? ನೆನೆಸಿದ್ದಂತೆಯೇ ಆಯಿತು" ಎಂದ. "ಅದೆಲ್ಲಾ ನಮಗೆ ತಿಳಿಯದು. ತಿಳಿದೂ ತಿಳಿದು ಯಾರು ವಿಷವನ್ನು ತಿನ್ನುತ್ತಾರೆ. ಹೋಗಿ ಗಲಾಟೆ ಮಾಡಿದರೆ ಕತ್ತು ಹಿಡಿದು ನೂಕಿಸಿಯೇನು" ಎಂದು ಗದರಿಸಿದ ರಾಜ.

ತೋರಿಕೆಯ ಭಯವನ್ನು ನಟಿಸುತ್ತಾ "ಪ್ರಭೊ, ಅಪ್ಪಣೆ, ಅಪ್ಪಣೆ" ಎಂದು ಬೀರಬಲ ತಾನಸೇನನನ್ನು ಸಂಗಡ ಕರೆದುಕೊಂಡು ಆಸ್ಥಾನ ದಿಂದ ಹೊರಬಿದ್ದನು. ಇಬ್ಬರೂ ಮತ್ತೆ ಡೆಲ್ಲಿ ನಗರವನ್ನು ಸೇರಿಕೊಂಡರು.

ತಾನಸೇನನು ಅಕ್ಬರನನ್ನು ಕಂಡಕೂಡಲೇ "ಪ್ರಭೊ, ಬೀರಬಲನು ಇಲ್ಲದಿದ್ದ ಪಕ್ಷಕ್ಕೆ ನಾವು ಮತ್ತೆ ತಮ್ಮ ದರ್ಶನ ಪಡೆಯುವ ಭಾಗ್ಯವೇ ಇರುತ್ತಿರಲಿಲ್ಲ. ಈತನ ಬುದ್ಧಿಕುಶಲತೆಯೇ ನಮ್ಮಿಬ್ಬರನ್ನೂ ಕಾಪಾಡಿತು" ಎಂದು ನಡೆದ ವಿಷಯವನ್ನೆಲ್ಲಾ ತಿಳಿಸಿದನು.

ಆಗ ಚಕ್ರವರ್ತಿ ತಾನಸೇನನ ಪಕ್ಷ ವಹಿಸಿ ಮಾತನಾಡಿದ ಮುಸಲ್ಮಾನರನ್ನು ಬರಮಾಡಿ ಕೊಂಡು ಬೀರಬಲನ ಚಾತುರ್ಯವನ್ನು ವಿವ ರಿಸಿದನು. ಅಂದಿನಿಂದ ಅವರಿಗೆ ಬೀರಬಲನ ಮೇಲಿನ ಅಸೂಯೆ ಮಾಯವಾಗಿ, ಗೌರವ ಭಾವ ಉಂಟಾಯಿತು.



# ಸೂರ್ಯ

ಸೂರ್ಯನು ನಮಗೆ ತೀರ ಹತ್ತಿರದಲ್ಲಿರುವ ನಕ್ಷತ್ರ. ನಂತರ ನಮಗೆ ಸಮೀಪದಲ್ಲಿರುವ ನಕ್ಷತ್ರವನ್ನು 'ಅಲ್ಫಾಸೆಂಟಾರಿ' ಎನ್ನುವರು. ಸೆಕೆಂಡಿಗೆ 1,86,000 ಮೈಲು ಪ್ರಯಾಣ ಮಾಡುವ ಕಾಂತಿ ಸೂರ್ಯನಿಂದ ನಮಗೆ ಸೇರಲು 8 ನಿಮಿಷಗಳು ಹಿಡಿಯುತ್ತವೆ. 'ಅಲ್ಫಾಸೆಂಟಾರಿ'ಯಿಂದ ಕಾಂತಿ ನಮಗೆ ತಲುಪಲು ಸುಮಾರು 4½ ವರ್ಷಗಳು ಹಿಡಿಯುತ್ತವೆ. ಇದರಿಂದ ಇತರ ನಕ್ಷತ್ರಗಳಿಗಿಂತ ಸೂರ್ಯ ನಮಗೆ ಎಷ್ಟು ಹತ್ತಿರದಲ್ಲಿರುವನೆಂಬುದನ್ನು ತಿಳಿಯಬಹುದು.

* ಸೂರ್ಯನಿಗಿಂತಲೂ ದೊಡ್ಡದಾದ ನಕ್ಷತ್ರಗಳಿರುವುವು. 'ಎಪ್ಸಿಲಾನ್ ಅರಿಗೇ' ಎಂಬುದು ನಕ್ಷತ್ರಗಳ ಜೋಡಿ. ಅದರಲ್ಲಿ ಒಂದು ಸೂರ್ಯನಿಗೆ 250 ರಷ್ಟು, ಎರಡನೆಯದರ ಅಡ್ಡಳತೆ ಸೂರ್ಯನ ಅಡ್ಡಳತೆಗೆ 3,000ದಷ್ಟು ಪಾಲು ಅಧಿಕವಾಗಿದೆ.
* ಸೂರ್ಯಬಿಂಬ ಕಣ್ಣಿಂದ ನೋಡಲಾಗದಂತಹ ಕಾಂತಿಮಯ ಗೋಳ. ಆದರೆ ಆ ಬಿಂಬದಲ್ಲಿ ಕಪ್ಪನೆಯ ಮಚ್ಚೆಗಳು ಕಾಣಿಸುತ್ತವೆ. ಗಾಜಿಗೆ ಮಸಿಬಳಿದು ಅದರಮೂಲಕ ಸೂರ್ಯನತ್ತ ನೋಡಿದರೆ ಭಾರಿಭಾರಿ ಮಚ್ಚೆಗಳು ಕಾಣಿಸುವುವು. ಅವುಗಳ ಕಡೆ ದಿನಾ ನಾವು ನೋಡುತ್ತಿದ್ದರೆ ಅವು ಎಡಗಡೆಯಿಂದ ಬಲಗಡೆಗೆ ಸರಿಯುತ್ತಿರುವುದು ಕಾಣಬರುತ್ತವೆ. ಸೂರ್ಯ ತನ್ನ ಸುತ್ತಲೂ ತಾನು ತಿರುಗುವುದರಿಂದ ಈ ರೀತಿ ಕಾಣಬರುತ್ತವೆ. ಬಲಗಡೆ ಅದೃಶ್ಯವಾದ ಮಚ್ಚೆ 12 ಅಥವಾ 13 ದಿನಗಳನಂತರ ಎಡಗಡೆ ಕಾಣಿಸಿಕೊಳ್ಳುತ್ತದೆ.
* ಸೂರ್ಯನ ಮಧ್ಯರೇಖೆಗೆ ಸಮೀಪದಲ್ಲಿರುವ ಮಚ್ಚೆ, ಸೂರ್ಯಧ್ರುವಗಳ ಹತ್ತಿರವಿರುವ ಮಚ್ಚೆಗಿಂತಲೂ ಶೀಘ್ರವಾಗಿ ಸುತ್ತಲೂ ತಿರುಗಿ ಬರುತ್ತದೆ. ಇದರಿಂದ ನಾವು ಸೂರ್ಯನು ಭೂಮಿಯಂತೆ ಘನ ಗೋಳವಲ್ಲವೆಂದೂ, ಸೂರ್ಯಗೋಳದಲ್ಲಿ ವಿವಿಧಭಾಗಗಳು ವಿವಿಧ ವೇಗದಿಂದ ತಿರುಗುವುದೆಂತಲೂ ತಿಳಿಯಬಹುದು.
* ಸೂರ್ಯಗೋಳದಮೇಲೆ ಉರಿಯುವ ವಾಯುಮಂಡಲದಲ್ಲಿ ಗೋಳಗಳು ಏರ್ಪಟ್ಟಾಗ ಅವು ಕಪ್ಪನೆಯ ಮಚ್ಚೆಗಳಾಗಿ ನಮಗೆ ಕಾಣಬರುವುವಂತೆ. ಸೂರ್ಯನ ಇತರ ಭಾಗಗಳಿಗಿಂತ ಇವು ಕಪ್ಪಾಗಿದ್ದರೂ ಇವುಗಳಿಗೂ ಅಪೂರ್ವ ಕಾಂತಿಯಿರುವುದು. ಒಂದೊಂದುಸಾರಿ ಈ ಮಚ್ಚೆಗಳು ಭೂಮಿಯನ್ನು ನುಂಗಿಬಿಡುವಷ್ಟು ದೊಡ್ಡದಾಗಿರುವುವು.
* ಸೂರ್ಯನ ಮಚ್ಚೆಗಳ ಪ್ರಭಾವ ಭೂಮಿಯಮೇಲಿರುವುದು ಸೋಜಿಗವಾಗಿ ತೋರುವುದು. ಭೂಮಿಯನ್ನು ಸದಾ ವಿದ್ಯುತ್ ತರಂಗಗಳೂ, ಆಯಸ್ಕಾಂತ ತರಂಗಗಳೂ ಆವರಿಸಿರುವುವು. ಅನೇಕ ಸೂರ್ಯನ ಮಚ್ಚೆಗಳು ಭೂಮಿಗೆದುರಾಗಿ ಬಂದಾಗ ಭೂಮಿಯಮೇಲಿರುವ ಆಯಸ್ಕಾಂತ ತರಂಗಗಳಲ್ಲಿ ಸಂಚಲನ ವುಂಟಾಗುವುದು.
* ಸೂರ್ಯನಲ್ಲಿ ಈ ಮಚ್ಚೆಗಳು ಹೆಚ್ಚುಕಡಿಮೆಯಾಗುತ್ತಿವೆ. ಈ ಬದಲಾವಣೆ ಒಂದು ಕ್ರಮವನ್ನು ಅನುಸರಿಸುವುದು. 11 ವರ್ಷಗಳಿಗೊಮ್ಮೆ ಮಚ್ಚೆಗಳ ಸಂಖ್ಯೆ ಯಥಾಸ್ಥಿತಿಗೆ ಬರುತ್ತವೆ. ಈ "ಹನ್ನೊಂದು ವರ್ಷದ ಋತು"ವಿಗೆ ಕಾರಣವನ್ನು ಯಾರೂ ಕಂಡುಹಿಡಿದಿಲ್ಲ.

# ಮಾ ಯಾ ಚ ಕ್ರ (ಹಿಂಬದಿಯ ಚಿತ್ರಕಥೆ-೭)

ರಾಕ್ಷಸಿಯನ್ನು ಸಂತೋಷದಿಂದ ಉಬ್ಬಿಸಿದ ರಾಣಿ, ತನ್ನ ಬೆರಳಲ್ಲಿರುವ ದೇವತೆಯ ಉಂಗುರವನ್ನು ತನ್ನ ಕಣ್ಣಿಗೆ ಒತ್ತಿಕೊಂಡು, ರಾಕ್ಷಸಿಯ ಮಗಳಿಗೆ ತಾಗಿಸಿದಳು. ಮರುಕ್ಷಣವೇ ರಾಕ್ಷಸಿಯ ಮಗಳು ಸುಂದರಿಯಾದ ಮಾನವ ಕನ್ಯೆಯಾಗಿ ಮಾರ್ಪಟ್ಟಳು. ರಾಕ್ಷಸಿ ಅತ್ಯಾನಂದದಿಂದ ಹೈಹರಿತು "ಆಹಾ! ಮಹಾತ್ಮಳೆ! ನನ್ನ ಮಾಯೆಯನ್ನೇ ಮೀರಿಸಿಬಿಟ್ಟೆ. ನಿನಗೇನು ಬೇಕೋ ಕೇಳು ಕೊಡುತ್ತೇನೆ" ಎಂದಳು.

"ಎಲ್ಲಿ, ನಿನ್ನ ಮಂತ್ರದ ಕೋಲನ್ನು ನನಗೆ ಕೊಡು" ಎಂದು ರಾಣಿ ಕೇಳಿದ್ದೇ ತಡ, ರಾಕ್ಷಸಿ ಕೊಟ್ಟೇಬಿಟ್ಟಳು. ಅದರೊಂದಿಗೆ ಆ ರಾಕ್ಷಸಿಯ ಸರ್ವಶಕ್ತಿಗಳೂ ಹೋಗಿಬಿಟ್ಟುವು. "ಈ ಮಂತ್ರದಂಡವನ್ನು ನಾನು ಲೋಕೋಪಕಾರಾರ್ಥವಾಗಿ ಉಪಯೋಗಿಸುತ್ತೇನೆ" ಎನ್ನುತ್ತಾ ರಾಣಿ ಕೋಟೆಯೊಳಗೆ ಹೋದಳು.

ರಾಕ್ಷಸಿ ತನ್ನ ಮಗಳ ಸೌಂದರ್ಯವನ್ನು ನೋಡಿ ಉಬ್ಬುತ್ತಾ ಇದ್ದಲ್ಲೇ ಇದ್ದುಬಿಟ್ಟಳು. ತನ್ನ ಶಕ್ತಿ ಸೂರೆಹೋದುದನ್ನೂ, ಅದರ ಪರಿಣಾಮವನ್ನೂ ಕೂಡಾ ಮರೆತುಬಿಟ್ಟಳು ಆ ರಾಕ್ಷಸಿ.

ರಾಣಿ ಸೀದಾಹೋಗಿ ಬಂಧಿಸಲ್ಪಟ್ಟಿರುವ ತನ್ನ ಪತಿಯನ್ನು ನೋಡಿದಳು. ಅನುರಾಗವತಿಯ ಸಾಧನೆಯಿಂದ ಈಗ ಅವನ ಶಾಪವು ಅಳಿದು ಕತ್ತೆಯ ತಲೆ ಮಾಯವಾಗಿತ್ತು. ಆತ ಮೂಲರೂಪದಿಂದ ವಿಸ್ಮಿತನಾಗಿ ಪತ್ನಿಯನ್ನು ಕಂಡು ಮೆಚ್ಚಿದ.

"ನನ್ನ ದುಡುಕುಬುದ್ಧಿಯಿಂದಾದ ತಪ್ಪಿಗಾಗಿ ಇಷ್ಟು ಕಷ್ಟಪಡಬೇಕಾಯಿತು" ಎಂದು ರಾಣಿ ಯಾವತ್ತೂ ವೃತ್ತಾಂತವನ್ನು ಪತಿಗೆ ನಿವೇದಿಸಿದಳು.

ಅಷ್ಟರಲ್ಲಿ ಆ ದೇವತೆ ಅವರಿದುರು ಪ್ರತ್ಯಕ್ಷಳಾಗಿ "ರಾಣಿ, ಇನ್ನು ನನ್ನ ಉಂಗುರ ಕೊಡಮ್ಮ" ಎಂದಳು ಮುಗುಳುನಗುತ್ತಾ. ರಾಣಿ ದೇವತೆಯ ಕೈಗೆ ಉಂಗುರವನ್ನು ಹಾಕುತ್ತಲೇ ಅದು ಚಕ್ರವಾಗಿ ಮಾರ್ಪಟ್ಟಿತು. ಆಗ ದೇವತೆಯೆಂದಳು: "ಈ ಚಕ್ರದಿಂದಲೇ ನನಗೂ ರಾಕ್ಷಸಿಗೂ ಜಗಳ ಬಂತು. ತೀರ್ಪು ಹೇಳಿದ ಈ ರಾಜನಿಗೆ ಕಷ್ಟ ಬಂತು. ನಿಮ್ಮ ಕಷ್ಟ ಪರಿಹರಿಸಲು ಈ ಚಕ್ರವನ್ನೇ ಉಂಗುರ ಮಾಡಿ ನಿನಗೆ ಕೊಟ್ಟೆ. ನಿನಗೆ ದಾರಿಯಲ್ಲಿ ಸಿಕ್ಕಿದ ವೃದ್ಧೆಯೂ, ತೋಟವೂ, ರೆಕ್ಕೆಯ ಕುದುರೆಯೂ ಎಲ್ಲಾ ನನ್ನ ಕಲ್ಪನೆಗಳೇ. ಇನ್ನು ಆ ರಾಕ್ಷಸಿಯ ಸತ್ವ ಅಡಗಿತು. ಸುಂದರಿಯಾಗಿ ಮಾರ್ಪಟ್ಟ ಅವಳ ಮಗಳು ನಿಮ್ಮ ಆಶ್ರಯದಲ್ಲಿರಲಿ. ಅವಳು ಒಳ್ಳೆಯವಳು. ರೆಕ್ಕೆಯ ಕುದುರೆಯನ್ನು ಹತ್ತಿ ನೀವು ಮೂವರೂ ನಿಮ್ಮ ಊರನ್ನುಸೇರಿ ಸುಖವಾಗಿರಿ. ನನ್ನ ಚಕ್ರವನ್ನು ತೆಗೆದುಕೊಂಡು ಹೋಗುತ್ತೇನೆ. ನಿಮ್ಮಿಬ್ಬರಿಗೂ ಜಯವಾಗಲಿ!"

ಹೀಗೆಂದು ಆ ದೇವತೆ ಅದೃಶ್ಯಳಾಗಿ ಹೋದಳು. (ಮುಗಿಯಿತು)

## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ 10 ರೂ.

1955 ಜೂಲೈ ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ :





ಮೇಲಿನ ಫೋಟೋಗಳಿಗೆ ಒಂದಕ್ಕೊಂದು ಸಂಬಂಧಿಸಿದಂತಿರುವ ಒಂದು ಜತೆ (ಎರಡು) ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲಿ ಬರೆದು ಈ ಕೆಳಗಿನ ವಿಳಾಸಕ್ಕೆ, ಮೇ 10 ನೇ ತಾರೀಕಿನೊಳಗೆ ನಮಗೆ ಬಂದು ತಲಪುವಂತೆ ಕಳಿಸತಕ್ಕದ್ದು. ನಂತರ ಬಂದವುಗಳನ್ನು ಗಮನಿಸುವುದಿಲ್ಲ.

ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು – 26.

---

### ಈ ತಿಂಗಳ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಫಲಿತ

ಮೊದಲನೇ ಫೋಟೋ : ಮಾಯದ ಬಗೆ

ಎರಡನೇ ಫೋಟೋ : ಹಾಯಾದ ನಗೆ

ಕಳಿಸಿದವರು : ಎಂ. ಎಲ್. ನಾರಾಯಣಾಚಾರ್ಯ

186. ಸೆಕೆಂಡ್‌ರೋಡ್, ಗಾಂಧಿನಗರ. ಬಳ್ಳಾರಿ.

ಬಹುಮತಿ ರೂ. 10/–ನ್ನು ಈ ತಿಂಗಳಿನಲ್ಲಿ ಕಳುಹಿಸಲ್ಪಡುತ್ತದೆ.



# ವಾರ್ತೆಗಳು-ವಿಶೇಷಗಳು

ಮಹಾತ್ಮಾಗಾಂಧೀ ಬೋಧನೆಗಳ ಅಭ್ಯಾಸ ಕ್ರಮವನ್ನು ಗೊತ್ತು ಮಾಡಲು ಕೇಂದ್ರ ಶಿಕ್ಷಣ ವಿಭಾಗವು ತಜ್ಞರ ಒಂದು ಸಮಿತಿಯನ್ನು ನಿಯಮಿಸಿರುತ್ತದೆ.

* * *

ಈ ವರ್ಷ ಜೂನ್ ತಿಂಗಳಲ್ಲಿ ಜರುಗುವ ಲೋಕಮಾನ್ಯ ಬಾಲಗಂಗಾಧರ ತಿಲಕರ ಶತಮಾನ ವರ್ಧಂತಿಯ ಸಂದರ್ಭದಲ್ಲಿ, ತಿಲಕರ ಚರಿತ್ರೆಯನ್ನು ಕುರಿತು ಬರೆಯಲ್ಪಟ್ಟ ಅತ್ಯುತ್ತಮ ಇಂಗ್ಲಿಷ್ ಗ್ರಂಥಕ್ಕೆ ೧೦ ಸಾವಿರ ರೂ. ಬಹುಮಾನ ಕೊಡುವುದಾಗಿ ಅಖಿಳ ಭಾರತಕಾಂಗ್ರೆಸ್ ಕಾರ್ಯಸಮಿತಿ ನಿರ್ಧರಿಸಿದೆ.

* * *

ಮದರಾಸು ಸರಕಾರದ ೧೯೫೩-೫೪ನೇ ವರ್ಷದ ಗ್ರಂಥಸ್ಪರ್ಧೆಯಲ್ಲಿ ಶಿಶುಸಾಹಿತ್ಯದ ಬಗ್ಗೆ ಚಂದಮಾಮ ವಾಚಕರಿಗೆ ಪರಿಚಿತರಾದ ಶ್ರೀ ಪಿ. ಸೀತಾರಾಮ ಭಟ್ಟ ಮಿತ್ತಬೈಲು ಇವರ "ಕಿರಿಯರ ಕಿನ್ನರಿ' 'ಚಿಣ್ಣರ ಹಾಡುಗಳು'' 'ಮಕ್ಕಳ ಮುದ್ದು' ಈ ಮೂರು ಪುಸ್ತಕಗಳಿಗೆ ೫೦೦ ರೂ. ಬಹುಮಾನ ನೀಯಲಾಗಿದೆಯೆಂದು ತಿಳಿದು ಬಂದಿದೆ.

* * *

ಹೈದ್ರಾಬಾದಿನ ಒಬ್ಬ ಧನಿಕನ ಬಳಿಯಲ್ಲಿ ಪ್ರಪಂಚದೊಳಗೆಲ್ಲಾ ದೊಡ್ಡದಾದ ಇಂದ್ರನೀಲಮಣಿಯುಂಟು. ೧೭೯೪ರಲ್ಲಿ ಟಿಪ್ಪುಸುಲ್ತಾನ್ ಆ ಧನಿಕನ ಪೂರ್ವಿಕರಿಗೆ ಅದನ್ನು ಬಹುಮಾನಿಸಿದನಂತೆ. ಅದನ್ನು ಅವನು ಈಗ ಜಾತೀಯ ಕಳಾಖಂಡಗಳ ವಿಕ್ರಯ ಸಂಘದವರಿಗೆ ಮಾರುತ್ತಾನೆ. ಈ ನೀಲವು ದೊಡ್ಡ ಕೋಳಿಮೊಟ್ಟೆಯಷ್ಟಿದೆ. ಇದರಭಾರ ೧೬ ತೊಲೆ. ೧೨ ನೆಯ ಶತಾಬ್ದದಿಂದ ಇದು ಕೈಮಾರುತ್ತಾ ಪ್ರಸ್ತುತ ಇವನ ಮನೆತನಕ್ಕೆ ಸೇರಿದೆ.

* * *

ಭಾರತದ ಸುಪ್ರಸಿದ್ಧವಾದ ಕಿರ್ಲೋಸ್ಕರ ಕಂಪೆನಿಯಲ್ಲಿ ಸಿದ್ಧವಾದ ಆಯಿಲ್ ಎಂಜಿನ್ನು



ಗಳಿಗೆ ಜರ್ಮನಿಯಿಂದ ಬೇಡಿಕೆ ಬಂದಿದ್ದು, ಭಾರತದ ಎಂಜಿನ್ನುಗಳು ಯೂರೋಪಕ್ಕೆ ಹೋಗುತ್ತಿರುವುದು ಇದುವೇ ಮೊದಲನೆಯ ಸಲವೆಂದು ಹೇಳಲಾಗಿದೆ.

*  *  *

ವರ್ಷಕ್ಕೆ ೧,೨೦೦ ರೂಪಾಯಿಗಳಿಗಿಂತ ಕಡಿಮೆ ಉತ್ಪನ್ನವಿರುವ ಕುಟುಂಬದ ವಿದ್ಯಾರ್ಥಿಗಳು ಬಡವರೆಂದು ಪರಿಗಣಿಸಿಕೊಂಡು ಅವರಿಗೆ ಮಿಡಲ್ ಸ್ಕೂಲುವರೆಗಿನ ಶಿಕ್ಷಣವನ್ನು ಪುಕ್ಕಟೆಯಾಗಿ ಕೊಡಲು ಮದರಾಸು ಸರಕಾರವು ನಿರ್ಣಯಿಸಿದೆ.

*  *  *

ಭಾರತದೇಶದಲ್ಲಿ ಪುಸ್ತಕದ ಮಾರಾಟವು ಏಕೆ ಹೆಚ್ಚಾಗುವುದಿಲ್ಲ ಎಂಬುದನ್ನು ಕಂಡು ಹಿಡಿಯಲಿಕ್ಕಾಗಿ ಪರದೇಶಗಳಲ್ಲಿರುವಂತೆ ಇಲ್ಲಿಯೂ ಒಂದು "ಪುಸ್ತಕ ಆಸ್ಪತ್ರೆ" ಸ್ಥಾಪಿಸಬೇಕೆಂದು ಪಂಡಿತ ಜವಹರಲಾಲ ನೆಹರು ಹೇಳಿದ್ದಾರೆ.

*  *  *

ಸೌರಾಷ್ಟ್ರದೊಳಗಿನ 'ಕವಡ್ರಾ' ಎಂಬ ಗ್ರಾಮದಲ್ಲಿ ಪೋಸ್ಟು ಮಾಸ್ತರನಿಲ್ಲದೆಯೇ ಪೋಸ್ಟ್ ಆಫೀಸು ಪ್ರಾರಂಭಿಸಲ್ಪಟ್ಟು, ಜನರು ಕಾರ್ಡು ಕವರುಗಳನ್ನು ಪ್ರಾಮಾಣಿಕ ರೀತಿಯಲ್ಲಿ ಡಬ್ಬಿಯೊಳಗೆ ದುಡ್ಡು ಹಾಕಿ ತೆಗೆದುಕೊಂಡು ಹೋಗುತ್ತಿದ್ದಾರೆಂದೂ, ಅದರಿಂದ ಲಾಭವೇ ಆಗಿರುವುದೆಂದೂ ತಿಳಿದುಬಂದಿದೆ.

*  *  *

ಭಾರತ ಸರಕಾರದ ಪ್ರಾಚೀನ ಶಿಲ್ಪ ಶೋಧಕ ಮಂಡಲಿಯವರು ಮೌರ್ಯ ಚಕ್ರವರ್ತಿ ಅಶೋಕನ ಕಾಲದ ಶಾಸನವೊಂದನ್ನು ಕಂಡುಹಿಡಿದಿರುತ್ತಾರೆ. ಅದರಲ್ಲಿ ಅಶೋಕನ ಹೆಸರಿದೆ. ಹೀಗೆ ಸಿಕ್ಕಿರುವ ಅಶೋಕನ ಹೆಸರುಳ್ಳ ಶಾಸನಗಳಲ್ಲಿ ಇದುವೇ ಮೊದಲನೆಯದಂತೆ.

*  *  *

ಲಂಡನ್ನಿನಲ್ಲಿ ಬ್ರಿಟಿಷ್ ಬ್ರಾಡ್‌ಕಾಸ್ಟಿಂಗ್ ಕಾರ್ಪೊರೇಷನ್ನಿನವರದು ಗ್ರಾಮಾಫೋನ್ ಪ್ಲೇಟುಗಳ ಸಂಗ್ರಹಾಲಯವೊಂದಿದೆ. ಅದರಲ್ಲಿ ೫ ಲಕ್ಷ ಪ್ಲೇಟುಗಳಿವೆಯಂತೆ. ಪ್ರಪಂಚದಲ್ಲಿಯೇ ದೊಡ್ಡ ಸಂಗ್ರಹವದು.

*  *  *

ರಾಜಾಸ್ಥಾನದ ಪ್ರಸಿದ್ಧವಾದ ಮರಳು ಭೂಮಿಯಲ್ಲಿ ಬೇಸಾಯ ಮಾಡಲು ಸಾಧ್ಯವುಂಟೆಂದು ಇಸ್ರಯೇಲಿನ ಅರಣ್ಯತಜ್ಞರು ಅಭಿಪ್ರಾಯಪಡುತ್ತಾರಂತೆ.



# ಚಿ ತ್ರ ಕ ಥೆ



ಉಪಾಧ್ಯಾಯರು ವಿದ್ಯಾರ್ಥಿಗಳನ್ನು ಊರಹೊರಗಿನ ಕೋಟೆ ಬದಿಗೆ ಕರೆದೊಯ್ದರು. ಹಿಂದೆ ಇಲ್ಲಿ ಒಂದು ರಾಜವಂಶವು ಇದ್ದಿತೆಂದೂ, ಈ ಸ್ಥಳದಲ್ಲಿ ಅಗೆದರೆ ಶಾಸನಗಳೂ. ಬಂಗಾರದ ನಾಣ್ಯಗಳೂ ದೊರಕುವುದೆಂದೂ ಹೇಳಿದರು. ಇದನ್ನೆಲ್ಲ ಕೇಳಿದ ವಾಸು ಗೋಪಿಯರು ಮರುದಿನವೇ ಹಾರೆ-ಗಧಾರೆಗಳೊಂದಿಗೆ ಅಲ್ಲಿಗೆ ಹೊರಟರು.




ಅಲ್ಲಿ ಎಷ್ಟೇ ಅಗೆದು ನೋಡಿದರೂ ಶಾಸನಗಳಾಗಲೀ ನಾಣ್ಯಗಳಾಗಲೀ ಸಿಗಲಿಲ್ಲ. ಟೈಗರ್ ಮಾತ್ರ ಅತ್ಯಾತುರದಿಂದ ತನಗೆ ಸಿಕ್ಕಿದ ವಸ್ತುವನ್ನು ಎತ್ತಿಕೊಂಡಿತು. ಪಾಪ. ಅದು ಅವರಿಗೆ ಕಾಸಿನ ಉಪಯೋಗವೂ ಇಲ್ಲದ್ದು! ಟೈಗರಿನ ಪ್ರೀತಿಯ ಎಲುಬಿನ ತುಂಡು!! ಅವರು ಕಷ್ಟಪಟ್ಟದ್ದೇ ಬಂತು; ಫಲ ಅವರ ನಾಯಿಗೆ!

Printed by B. NAGI REDDI at the B. N. K. Press Ltd., Madras 26, and Published by him for Chandamama Publications, Madras 26. Controlling Editor: SRI 'CHAKRAPANI'

Photo by B. Bhansali



ಬಹುಮಾನ ಪಡೆದ ಶೀರ್ಷಿಕೆ

ಹಾಯಾದ ನಗೆ

ಕಳಿಸಿದವರು:
ಎಂ. ಎಲ್. ನಾರಾಯಣಾಚಾರ್ಯ

